## ಈ ಲೇಖಕರ ಇತರ ಕೃತಿಗಳು

**ಕಾದಂಬರಿ—**

ಪಯಣದ ಹಾದಿಯಲ್ಲಿ

ಮುರುಕು ಮಂಟಪ

ಆಲದ ಹೂ

**ಸಣ್ಣ ಕಥೆಗಳು—**

ಮೈಥಿಲಿ

**ಕವನ ಸಂಗ್ರಹ—**

ಬಾಡದ ಹೂ

ಉಷಾಸ್ವಪ್ನ

**ವಿಮರ್ಶೆ—**

ಕಾರಂತರ ಕಾದಂಬರಿಗಳು

**ಅನುವಾದ—**

ಸ್ವಾಮಿ (ಶರತ್ ಕಾದಂಬರಿ)

ನಿಷ್ಕೃತಿ( ,, )

**ಸಂಪಾದಿತ—**

ಮುತ್ತು ಹವಳ

**ಇತರ—**

ಆಧುನಿಕ ಚೀನ

# ವಿವರ

# ಬಾಬು ರಾಜೇಂದ್ರಪ್ರಸಾದ್

## ೧

## ಬಾಲ್ಯ

ಸಂಯುಕ್ತ ಪ್ರಾಂತದಲ್ಲಿ ಅಮೋರಾಹಳ್ಳಿಯಿಂದ ಬಹಳ ದಿನಗಳ ಹಿಂದೆ ಒಂದು ಕಾಯಸ್ಥ ಸಂಸಾರ ಪೂರ್ವದಕಡೆಗೆ ವಲಸೆ ಹೊರಟಿತು. ಬಲಿಯ ಗ್ರಾಮದಲ್ಲಿ ಕೆಲಕಾಲವಿದ್ದು ಎರಡು ಗುಂಪಾಯಿತು. ಒಂದು ತಂಡ ಬಿಹಾರಿನ ಸಾರಣ ಜಿಲ್ಲೆಯ ಜೀರಾದೇಯಿ ಗ್ರಾಮಕ್ಕೆ ವಲಸೆ ಹೋಗಿ ಅಲ್ಲಿ ನೆಲೆ ನಿಂತಿತು. ಮತ್ತೊಂದು ಗಯಾಕ್ಕೆ ಹೋಗಿ ಅಲ್ಲಿ ನೆಲೆಯೂರಿತು. ಇದು ಬಹಳ ದಿನಗಳ ಹಿಂದಿನ ಮಾತು. ಎಂಟು ಹತ್ತು ತಲೆಮಾರಿನ ಹಿಂದೆ ನಡೆದುದು. ಜೀರಾದೇಯಿ ಗ್ರಾಮಕ್ಕೆ ಬಂದ ಕಾಯಸ್ಥ ಸಂಸಾರ ಬಡತನದಲ್ಲಿ ಬೆಳೆದುದು, ದಿನದ ಊಣಿಸಿಗಾಗಿ ಪರದಾಟ ಪಡುವ ಸ್ಥಿತಿ ಸಾಮಾನ್ಯವಾಗಿತ್ತು. ಗ್ರಾಮಕ್ಕೆ ಬಂದ ಈ ಸಂಸಾರವನ್ನು ಆ ಹಳ್ಳಿಯವರು ತಮ್ಮ ಜೊತೆಯಲ್ಲಿಯೇ ಉಳಿಸಿಕೊಂಡರು. ವಿದ್ಯೆಯ ಗಂಧವೇ ಇಲ್ಲದ ಹಳ್ಳಿಗೆ ಓದುಬರಹ ಬಲ್ಲವರು ಬೇಕಾಗಿತ್ತು. ಅಂತೆಯೇ ಸಾಮಾನ್ಯವಾಗಿ ಶಿಕ್ಷಣ ಪಡೆದ ಈ ಕಾಯಸ್ಥ ಕುಟುಂಬ ಆ ಹಳ್ಳಿಯವರಿಗೆ ದೇವರ ವರದಂತೆ ತೋರಿತ್ತು. ಇವರಿಂದ ಊರಿನಲ್ಲಿ ನೆಲೆ ಸಿಕ್ಕಿದಂತಾಯಿತು; ಆದರೂ ತಲೆಹತ್ತಿದ ಬಡತನ ಬಿಡಲಿಲ್ಲ. ಐದಾರು ತಲೆಮಾರಿನ ತನಕ ಹಳ್ಳಿಯ ಜಮಿನ್ದಾರರ ಬಳಿಯಲ್ಲಿ ರೈತರಾಗಿಯೇ ಈ ಮನೆತನದವರು ಕೆಲಸ ಮಾಡಿಕೊಂಡಿದ್ದರು. ಮನೆ ಹುಲ್ಲು ಛಾವಣಿಯದೇ, ಮಣ್ಣಿನ ಗೋಡೆಯದೇ! ಬೇಸಾಯಮಾಡುವ ನೆಲ ಬೇರೊಬ್ಬರದು! ಆದರೆ ಓದು ಬರಹ ಬರುತ್ತಿದ್ದುದರಿಂದ ಎಲ್ಲರಿಗೂ ನೆರವಾಗುತ್ತಿದ್ದರು. ಪಕ್ಕದ ಹಥುವಾ ರಾಜ್ಯದ ಸಂಬಂಧವೂ ಈ ಓದು ಬರಹದಿಂದಲೇ ಬೆಳೆದು ಬಂದಿತು. ಆಗಾಗ ಆ ರಾಜ್ಯದ ಕಾಗದ ಪತ್ರಗಳ ವಿಷಯದಲ್ಲಿ ಇವರ

ನೆರವು, ಸಹಾಯ ಸಿಗುತ್ತಿತ್ತು. ಆದರೂ ಈ ಮನೆತನದವರು ಯಾರೂ ಆ ರಾಜ್ಯದಲ್ಲಿ ದೊಡ್ಡ ಪದವಿಯಲ್ಲಿರಲಿಲ್ಲ !

ಬಾಬು ರಾಜೇಂದ್ರ ಪ್ರಸಾದರು ಈ ಮನೆತನದವರು. ಅವರಿಗೆ ಹಿಂದೆ, ಏಳೆಂಟು ತಲೆಮಾರಿನ ಪೀಳಿಗೆಯವರು ಜೀರಾದೇಯಿಯಲ್ಲಿ ಬಂದು ನೆಲಸಿದ್ದರು. ಗೌತಮ ಬುದ್ಧನಾದ ಪವಿತ್ರಭೂಮಿ ಬಿಹಾರ್ ಪ್ರಾಂತ್ಯ. ಅಲ್ಲಿಯೇ ಭಾರತದ ಲೋಕರಾಜ್ಯ (ರಿಪಬ್ಲಿಕ್) ದ ಮೊತ್ತಮೊದಲನೆಯ ಅಧ್ಯಕ್ಷರ ಜನನವಾಗಬೇಕಿತ್ತು ! ಹಳ್ಳಿಯೇ ಜೀವನಾಡಿಯಾದ ನಮ್ಮ ದೇಶದ ಮೊದಲ ರಾಷ್ಟ್ರಾಧ್ಯಕ್ಷರು ಹುಟ್ಟಿದುದು ಜೀರಾದೇಯಿ ಹಳ್ಳಿಯಲ್ಲಿ ರೈತ ಮನೆತನದಲ್ಲಿ !

ರಾಜೇಂದ್ರಪ್ರಸಾದರ ಅಜ್ಜ ಮಿಶ್ರೀಲಾಲ್ ಬಹಳ ಸಣ್ಣ ವಯಸ್ಸಿನಲ್ಲೇ ತೀರಿಕೊಂಡರು. ಮಿಶ್ರೀಲಾಲರ ಅಣ್ಣ ಚೌಧುರಿ ಲಾಲರೇ ಸಂಸಾರದ ಎಲ್ಲ ಹೊಣೆ ಹೊರಬೇಕಾಯಿತು. ಮಿಶ್ರೀಲಾಲರಿಗೆ ಒಬ್ಬನೇ ಮಗ, ಆತನೇ ಮಹದೇವಸಹಾಯ್. ಚೌಧುರಿಲಾಲರಿಗೂ ಒಬ್ಬ ಮಗನಿದ್ದ—ಜಗದೇವಸಹಾಯ್ ಎಂದು. ಚೌಧುರಿ ಲಾಲರು ಈ ಇಬ್ಬರು ಹುಡುಗರನ್ನು ತಮ್ಮ ಸ್ವಂತ ಮಕ್ಕಳಾಗಿಸಿಕೊಂಡು ಸಾಕಿದರು. ಅವರ ಸ್ವಂತ ಮಗ ಜಗದೇವನಿಗೆ ಒಬ್ಬಳು ಮಗಳಾಗಿ ತೀರಿಕೊಂಡಳು; ಬೇರೆ ಮಕ್ಕಳಾಗಲಿಲ್ಲ. ಮಿಶ್ರೀಲಾಲನ ಮಗ ಮಹದೇವನಿಗೆ ಮೂವರು ಹೆಣ್ಣುಮಕ್ಕಳೂ ಇಬ್ಬರು ಗಂಡು ಮಕ್ಕಳೂ ಆದರು. ಒಂದು ಹೆಣ್ಣುಮಗು ಚಿಕ್ಕತನದಲ್ಲಿಯೇ ತೀರಿಹೋಯಿತು. ಎರಡನೆಯ ಮಗಳು ಭಗವತೀದೇವಿ ಮದುವೆಯಾದ ಕೆಲವೇ ದಿನಕ್ಕೆ ವಿಧವೆಯಾಗಿ ತವರು ಸೇರಿದಳು. ಮೂರನೆಯ ಮಗಳು ಸಂತಾನವಿಲ್ಲದೆ ತೀರಿಕೊಂಡಳು. ಗಂಡು ಮಕ್ಕಳಲ್ಲಿ ಹಿರಿಯವನು ಮಹೇಂದ್ರಪ್ರಸಾದ್. ಎಲ್ಲರಿಗೂ ಕಿರಿಯವನೇ ರಾಜೇಂದ್ರಪ್ರಸಾದ್.

ಚೌಧುರಿಲಾಲರ ಹೆಸರು ನಿಷ್ಠೆಗೆ, ಶ್ರದ್ಧೆಗೆ, ಸತ್ಯಪ್ರಿಯತೆಗೆ ಹೆಸರಾಗಿತ್ತು. ಜನರೆಂದರೆ ಅವರಿಗಾಗಿ ಜೀವ ಕೊಡಲೂ ಸಿದ್ಧವಾಗಿದ್ದರು. ದೇವರಲ್ಲಿ ಹಿರಿಯರಲ್ಲಿ ಅಪೂರ್ವ ಭಕ್ತಿ, ಕಾರ್ಯದಲ್ಲಿ ದಕ್ಷತೆ, ಜೀವನ

ದಲ್ಲಿ ಪರಿಶುದ್ಧತೆ, ತಮ್ಮ ಸುತ್ತಲಿನ ಜನರಲ್ಲಿ ವಿಶ್ವಾಸ, ಪ್ರೇಮ ಅವರ ಜೀವನದ ಮಂತ್ರ. ಚೌಧುರಿಲಾಲರು ಹಥುವಾರಾಜ್ಯಕ್ಕೆ ಬಹಳ ಬೇಕಾದವರು. ಆ ರಾಜ್ಯದ ದಿವಾನರಾಗಿ ಸುಮಾರು ೨೫-೩೦ ವರ್ಷ ಕೆಲಸ ಮಾಡಿದರು. ಅವರ ಸತ್ಯನಿಷ್ಠೆಗೆ ಒಂದು ಘಟನೆಯೇ ಸಾಕು. ಆಗ ಹಥುವಾದಲ್ಲಿ ಛತ್ರಧಾರಿಸಾಹೀ ರಾಜರಾಗಿದ್ದರು ಆತ ತಮ್ಮ ಮಗನಿಗೆ ರಾಜ್ಯಕೊಡದೆ, ತಮ್ಮ ಉಯಿಲಿನಲ್ಲಿ ತಮ್ಮ ಮೊಮ್ಮಗ ರಾಜೇಂದ್ರಪ್ರತಾಪ್‌ಸಾಹಿಯ ಹೆಸರಿಗೆ ರಾಜ್ಯದ, ಸಿಂಹಾಸನದ ಹಕ್ಕನ್ನು ಬರೆದುಬಿಟ್ಟರು. ಛತ್ರಧಾರಿಗೆ ಚೌಧುರಿಲಾಲರಲ್ಲಿ ಸಂಪೂರ್ಣ ವಿಶ್ವಾಸ, ನಂಬುಗೆ, ತಮ್ಮ ಚಿಕ್ಕಮೊಮ್ಮಗನನ್ನು ಕಾಪಾಡಿ ಬೆಳೆಸಿ ಸಿಂಹಾಸನದಲ್ಲಿ ಕುಳ್ಳಿರಿಸುವ ಜವಾಬ್ದಾರಿಯನ್ನು ಚೌಧರಿಯವರ ಮೇಲೆ ಹೊರಿಸಿಬಿಟ್ಟರು. ಮಹಾರಾಜರ ಸಾವಿನ ನಂತರ ಮೊಮ್ಮಗನ ಜೀವಕ್ಕೇ ಕುತ್ತು ಬಂದಿತು. ರಾಜಸಿಂಹಾಸನಕ್ಕಾಗಿ ಮೊಕದ್ದಮೆ ನಡೆದು ಇಂಗ್ಲೆಂಡಿನ ಪ್ರೀವಿಕೌನ್ಸಿಲ್‌ನಲ್ಲಿ ಅದು ಅವಿಭಕ್ತ ರಾಜ್ಯ. ಅದರ ಬಗ್ಗೆ ಉಯಿಲು ಮಾಡಲು ರಾಜನಿಗೆ ಹಕ್ಕುಂಟು ಆದ್ದರಿಂದ ರಾಜ್ಯದ ಹಕ್ಕುದಾರ ರಾಜೇಂದ್ರಪ್ರತಾಪಸಾಹೀ ಎಂದು ತೀರ್ಮಾನವಾಯಿತು. ಆದರೆ ಮೊಕದ್ದಮೆ ನಡೆಯುತ್ತಿರುವಾಗ ಪುಟ್ಟಮಹಾರಾಜರ ಜೀವವನ್ನು ಉಳಿಸುವುದು ಚೌಧುರಿಯವರಿಗೆ ಬಹಳ ಕಷ್ಟವಾಯಿತು. ತಮ್ಮ ಪ್ರಾಣಕ್ಕೆ ಒದಗುವ ಅಪಾಯ ಕೂಡ ಲೆಕ್ಕಿಸದೆ ಯಾವಾಗಲೂ ರಾಜರ ಜತೆಯಲ್ಲಿಯೇ ಇರುತ್ತಿದ್ದರು. ರಾಜರಿಗೆಲ್ಲಿ ವಿಷಹಾಕಿ ಕೊಂದಾರೋ ಎಂದು ಅವರಿಗೆ ಕೊಡುವ ಅನ್ನವನ್ನು ತಾವು ಮೊದಲು ಬಾಯಿಗೆ ಹಾಕಿಕೊಂಡು, ಮನಸ್ಸು ಸಮಾಧಾನಗೊಂಡ ನಂತರ ಅವರಿಗೆ ಕೊಡುತ್ತಿದ್ದರು. ರಾಜರ ಮಂಚದ ಬಳಿಯಲ್ಲಿಯೇ ತಾವೂ ಮಲಗಿಕೊಂಡು ರಕ್ಷಣೆ ನಡೆಸುತ್ತಿದ್ದರು. ಇವರ ಬಗ್ಗೆ ಮಹಾರಾಜರಿಗೆ ಎಷ್ಟು ಗೌರವವೆಂದರೆ ಅವರೆದುರಿಗೆ ಎಂದೂ ತಂಬಾಕು ಸೇದುತ್ತಿರಲಿಲ್ಲ ಚೌಧುರಿಲಾಲರು ಬಂದರೆಂದರೆ ಹುಕ್ಕಾವನ್ನು ಒಳಕ್ಕೆ ಕಳುಹಿಸಿಬಿಡುತ್ತಿದ್ದರು.

ಚೌಧುರಿಲಾಲರು ದಿವಾನರಾದರೂ ಸಂಬಳ ಬಹಳ ಕಡಿಮೆ.

ತಿಂಗಳಿಗೆ ಐವತ್ತೋ ಅರುವತ್ತೋ ರೂಪಾಯಿ ಬರುತ್ತಿತ್ತು. ಜತೆಗೆ ಮನೆಗೆ ಸಂಸಾರದಲ್ಲಿರುವ ಎಲ್ಲರಿಗೂ ಬೇಕು ಬೇಕೆನಿಸುವಷ್ಟು ಸಾಮಾನುಸರಂಜಾಮು ಅರಮನೆಯಿಂದ ಬರುತ್ತಿತ್ತು. ರಾಜ್ಯದ ಆದಾಯ ಮೂರು ನಾಲ್ಕರಷ್ಟು ಹೆಚ್ಚುಗೊಳಿಸಿದರು ಚೌಧರಿಯವರು. ಆದರೂ ಅಲ್ಲಿನ ರೈತರೆಲ್ಲರೂ ದಿವಾನರನ್ನು ಪ್ರೀತಿಸುತ್ತಿದ್ದರು. ರಾಜೇಂದ್ರಪ್ರಸಾದರಿಗೆ ಅಸಹಕಾರ ಚಳುವಳಿಯ ಕಾಲದಲ್ಲಿ ದಿವಾನ ಚೌಧುರಿಲಾಲರ ಮೊಮ್ಮಗನೆಂದು ವಯಸ್ಸಾದ ಕೆಲವರು ರೈತರು ಗೌರವ ತೋರಿಸಿ ಅನುಕೂಲಮಾಡಿದರು. ಅಂತಹ ಅಚಲ ವಿಶ್ವಾಸ ಗಳಿಸಬೇಕಾದರೆ ಚೌಧರಿಲಾಲರು ಎಷ್ಟು ಶ್ರದ್ಧೆಯಿಂದ ಸೇವೆಯ ದೃಷ್ಟಿಯಿಂದ ಕಾರ್ಯ ನಿರ್ವಹಣ ಮಾಡಿರಬೇಕು !

ಚೌಧರಿಲಾಲರು ಈ ಕಾಲದಲ್ಲಿಯೇ ಮನೆಗೂ ಒಂದಿಷ್ಟು ಜಮೀನು ಮಾಡಿದರು. ಮನೆಯಲ್ಲಿ ತಯಾರಾದ ಅಕ್ಕಿಯನ್ನು ಮಾರಿ ಬಂದ ಹಣದಲ್ಲಿ ಈ ಜಮೀನು ಕೊಂಡುದು. ತಮ್ಮ ಮಗ ಜಗದೇವನಿಗೂ; ತಮ್ಮನ ಮಗ ಮಹದೇವನಿಗೂ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡಿದರು. ಆದರೆ ಆಗ ಇಂಗ್ಲಿಷ್ ಇನ್ನೂ ಮುಖ್ಯ ಭಾಷೆಯಾಗಿರಲಿಲ್ಲ ಆದ್ದರಿಂದ ಅವರಿಗೆ ಸಿಕ್ಕಿದ ವಿದ್ಯಾಭ್ಯಾಸ ಪಾರಸೀ ಭಾಷೆಯಲ್ಲಿ ! ಮಹಾರಾಜರ ಅರಮನೆಯಲ್ಲಿ ಪಾರಸಿ ಕಲಿಸುವ ಮೌಲವಿಯವರೇ ಜಗದೇವ ಮಹದೇವರಿಗೂ ಹೇಳುತ್ತಿದ್ದರು. ಚೌಧರಿಲಾಲರು ರಾಜೇಂದ್ರಪ್ರತಾಪ್‌ಸಾಹಿಯವರ ಮರಣದ ನಂತರ ತಮ್ಮ ದಿವಾನಗಿರಿಯನ್ನು ಬಿಟ್ಟು ಜೀರಾದೇಯಿಗೆ ಬಂದು ಅಲ್ಲಿಯೇ ನಿಂತರು.

ಜಮೀನ್ದಾರಿಯ ಹುಟ್ಟುವಳಿ ಸುಮಾರು ಎಂಟು ಹತ್ತುಸಾವಿರ ರೂಪಾಯಿಗಳು. ಅದರ ಕಾರುಬಾರನ್ನೆಲ್ಲಾ ಜಗದೇವ್ ನೋಡಿಕೊಳ್ಳುತ್ತಿದ್ದರು. ರಾಜೇಂದ್ರರ ತಂದೆ ಮಹದೇವ ಜಮೀನ್ದಾರಿಯ ವಿಷಯಕ್ಕೆ ಯಾವ ಆಸಕ್ತಿಯನ್ನೂ ವಹಿಸುತ್ತಿರಲಿಲ್ಲ. ತೋಟಗಾರಿಕೆ ಅವರಿಗೆ ಬಹಳ ಪ್ರಿಯವಾದುದು. ಸಂಸ್ಕೃತ ತಿಳಿದಿತ್ತು. ಪಾರಸಿಯಲ್ಲಿ ಒಳ್ಳೆಯ ವಿದ್ವಾಂಸರಾಗಿದ್ದರು. ವೈದ್ಯಗಾರಿಕೆ, ಕುದುರೆ ಸವಾರಿಯಲ್ಲಿ ಅವರನ್ನು ಮೀರಿಸುವವರಿಲ್ಲ. ಚಿಕ್ಕತನದಲ್ಲಿಯೇ ತಮ್ಮ ಮಕ್ಕಳಿಗೆ ಕುದುರೆ ಸವಾರಿಯನ್ನು ಕಲಿಸಿದರು.

ಬಾಲ್ಯದಲ್ಲಿ ರಾಜೇಂದ್ರ ತಾಯಿ ಅಜ್ಜಿಯರ ಸಹವಾಸದಲ್ಲೇ ಬೆಳೆದುದು. ಉಳಿದ ಹುಡುಗರೊಂದಿಗೆ ಆಗಾಗ ಆಟವಾಡುತ್ತಿದ್ದುದಲ್ಲದೆ ಬೇರೆಲ್ಲಿಗೂ ಹೋಗುವಂತಿರಲಿಲ್ಲ. ಛಪರಾಕ್ಕೆ ಇಂಗ್ಲಿಷ್ ಕಲಿಯಲು ಅಣ್ಣ ಮಹೇಂದ್ರ ಹೊರಟುಹೋಗಿದ್ದ. ರಾಜೇಂದ್ರ ತಾಯಿ ಅಜ್ಜಿಯರ ಬಳಿ ಕುಳಿತು ರಾಮಾಯಣದ ಕತೆಗಳನ್ನು ಕೇಳುತ್ತಿದ್ದ. ರಾತ್ರಿ ಬಹಳ ಬೇಗನೆ ಮಲಗುವ ಅಭ್ಯಾಸ ರಾಜೇಂದ್ರರಿಗೆ ಚಿಕ್ಕಂದಿನಿಂದ ಬಂದುದು. ಸಂಜೆಯ ವೇಳೆ ಒಮ್ಮೊಯಾದರೂ ಊಟಮಾಡುವಾಗ ಎಚ್ಚರವಾಗಿರುತ್ತಿರಲಿಲ್ಲ. ಹಳ್ಳಿಯ ಆ ಮನೆಯಲ್ಲಿ ಎಲ್ಲರ ಊಟ ಆಗುವ ವೇಳೆಗೆ ರಾತ್ರಿ ೧೧-೧೨ ಗಂಟೆ ಆಗುತ್ತಿತ್ತು. ಇದರಿಂದ ನಿದ್ರೆಮಾಡುತ್ತಲೇ ಬಾಯಿಗೆ ತುತ್ತುಹಾಕಿಸಿಕೊಂಡು ಊಟಮಾಡುತ್ತಿದ್ದ. ರಾತ್ರಿ ಬೇಗನೆ ಮಲಗುತ್ತಿದ್ದು ಬೆಳಿಗ್ಗೆ ಬಹಳ ಬೇಗನೆ ಏಳುತ್ತಿದ್ದ. ಹಾಸಿಗೆಯಲ್ಲಿ ಮಲಗಿ ಹಾಗೆಯೇ ತಾಯಿಯನ್ನೆಬ್ಬಿಸಿ ಬಿಡುವುದು, ಮತ್ತೆ ಆಕೆ ನಿದ್ರೆ ಹೋಗುವಂತಿಲ್ಲ. ಆಗ ಆಕೆ ಬೆಳಕುಹರಿಯುವ ತನಕ ರಾಮಾಯಣದ ಕತೆಯನ್ನೋ, ಪ್ರಭಾತ ಗೀತೆಯನ್ನೋ ಹೇಳುತ್ತಿರುತ್ತಿದ್ದರು. ಹೀಗೆ ರಾತ್ರಿ ಬೇಗನೆ ಮಲಗುವ ಅಭ್ಯಾಸ ದೊಡ್ಡವರಾದ ಮೇಲೂ ರಾಜೇಂದ್ರರನ್ನು ಬಿಡಲಿಲ್ಲ !

ಜೀರಾದೇಯಿಹಳ್ಳಿಯ ಜೀವನ ಎಲ್ಲ ಹಳ್ಳಿಗಳಂತೆಯೇ ಸಹಜವಾದುದು. ಸರಲವಾದುದು. ಬೇಕಾದ ಪದಾರ್ಥಗಳೆಲ್ಲಾ ಅಲ್ಲಿಯೇ ಸಿಗುತ್ತಿದ್ದುವು. ಅಲ್ಲದೆ ವಾರಕ್ಕೆರಡು ಬಾರಿ ಸಂತೆಯೂ ಆಗುತ್ತಿತ್ತು. ಸುತ್ತಮುತ್ತಿನ ಗ್ರಾಮಗಳವರು ಅಂಗಡಿಗಳನ್ನಿಟ್ಟು ತಮ್ಮಲ್ಲಿನ ಪದಾರ್ಥಗಳನ್ನು ಮಾರುತ್ತಿದ್ದರು. ಸ್ವಯಂ ಪರಿಪೂರ್ಣವಾಗಿ ಹಳ್ಳಿಯಿಂದ ಬೇರೆಲ್ಲಿಗೂ ಹೋಗುವ ಅವಶ್ಯಕತೆಯೇ ಇರುತ್ತಿರಲಿಲ್ಲ. ಯಾರಿಗಾದರೂ ಅತ್ಯವಶ್ಯವಾದ ಅಲ್ಲಿ ಸಿಗದ ವಸ್ತು ಬೇಕಾದರೆ ಛಪರಾಕ್ಕೋ, ಸೀವಾನಕ್ಕೋ ಹೋಗಿಬರುತ್ತಿದ್ದರು ಸೀವಾನ ಒಂದು ಕಸಬಾ. ಅಲ್ಲಿಯೇ ಮ್ಯಾಜಿಸ್ಟ್ರೇಟರ ಕೋರ್ಟು ಕೂಡ ಇದ್ದುದರಿಂದ ಹಳ್ಳಿಯ ಜನಕ್ಕೆ ಅದೊಂದು ದೊಡ್ಡ ಸ್ಥಳವೆನಿಸಿತ್ತು.

ಹಳ್ಳಿಯಲ್ಲಿ ಆಗಾಗ ರಾಮಾಯಣ, ಭಾಗವತ ಕತೆಗಳು ಆಗು

ತ್ತಿದ್ದುವು. ಹೊರಗಿನಿಂದ ಒಬ್ಬರಿಬ್ಬರು ಪಂಡಿತರು ಬಂದು ಅಲ್ಲಿಯೇ ಎರಡು ತಿಂಗಳೋ ಮೂರುತಿಂಗಳೋ ನಿಲ್ಲುತ್ತಿದ್ದರು. ಯಾರ ಮನೆಯಲ್ಲಾದರೂ ಇಳಿದುಕೊಂಡು ಅಲ್ಲಿಯೇ ಪುರಾಣ ಕಥೆ ಹೇಳುತ್ತಿದ್ದರು. ಹಳ್ಳಿಯ ಜನರೆಲ್ಲ ಇದರಲ್ಲಿ ಭಾಗವಹಿಸುತ್ತಿದ್ದರು. ಪೂರ್ಣವಾದ ದಿನ, ಮಂಗಳದ ದಿನ ಹಳ್ಳಿಯವರೆಲ್ಲಾ ಸೇರಿ ಸಂತರ್ಪಣೆ ನಡೆಸುತ್ತಿದ್ದರು. ಹಳ್ಳಿಯ ಮತ್ತೊಂದು ಮನರಂಜನೆಯ ಸಾಧನ ರಾಮಲೀಲಾಪ್ರಸಂಗಗಳು. ದಕ್ಷಿಣ ಕನ್ನಡ ಜಿಲ್ಲೆಯ ಯಕ್ಷಗಾನ ಮೈಸೂರು ಸೀಮೆಯ ಬಯಲು ನಾಟಕಗಳ ಹಾಗೆಯೇ ಈ ರಾಮಲೀಲಾ ಪ್ರಸಂಗಗಳು. ಪ್ರಸಂಗ ನಡೆಸುವ ನಾಟಕದ ತಂಡ ಬಂದು ಇಪ್ಪತ್ತು ಮೂವತ್ತು ದಿನ ಊರಿನಲ್ಲಿಯೇ ನೆಲಸುತ್ತಿದ್ದರು. ರಾಮಾಯಣದ ಕತೆಯೇ ಅವರ ವಸ್ತು. ಆದರೆ ರಾಮನ ಪಾತ್ರ ವಹಿಸುವವನಿಗಾಗಲೀ, ಲಕ್ಷ್ಮಣನಿಗಾಗಲೀ ಓದಲು ಬರುತ್ತಿರಲಿಲ್ಲ. ಹಿಂದೆ ಒಬ್ಬ ನಿಂತು ತುಲಸೀರಾಮಾಯಣದಿಂದ "ಶ್ರೀರಾಮಚಂದ್ರ ಹೇಳಿದರು. ಹೇ ಸೀತಾ—" ಎಂದು ಹೇಳಿಕೊಡುತ್ತಿದ್ದ. ಅದನ್ನೇ ರಾಮನ ವೇಷದವನು ಹೇಳುತ್ತಿದ್ದ. ಜನಕ್ಕೆ ಈ ಮಾತುಗಳಲ್ಲಿ ಆಸಕ್ತಿಯೇ ಇರಲಿಲ್ಲ. ಅಲ್ಲದೆ ನೂರಿನ್ನೂರು ಗಜದವರೆಗೆ ಜನ ಕುಳಿತಿರುತ್ತಿದ್ದುದರಿಂದ ಎಲ್ಲರಿಗೂ ಮಾತೂ ಕೇಳುತ್ತಿರಲಿಲ್ಲ. ಎಲ್ಲರಿಗೂ ಇಷ್ಟವಾಗುತ್ತಿದ್ದುದು ಪ್ರಿಯವಾದುದು ಕುಣಿತ. ರಾಮನ ಪಾತ್ರ, ಸೀತೆಯ ಪಾತ್ರ ಎಲ್ಲಾ ಪಾತ್ರಗಳೂ ಕುಣಿಯುತ್ತಿದ್ದರು. ಪ್ರತಿ ದಿನವೂ ಸಂಜೆ ೪ ಗಂಟೆಯಿಂದ ೬ ಗಂಟೆಯತನಕ ರಾಮಾಯಣದ ಒಂದು ಭಾಗವನ್ನು ಹೀಗೆ ಪ್ರಸಂಗಗೊಳಿಸುತ್ತಿದ್ದರು. ಪಟ್ಟಾಭಿಷೇಕದ ದಿನ ಊರಿನವರೆಲ್ಲಾ ಸೇರಿ ಹಬ್ಬ ಮಾಡಿ ರಾಮಲೀಲೆಯ ಪಂಗಡಕ್ಕೆ ನಜರನ್ನೊಪ್ಪಿಸುತ್ತಿದ್ದರು.

ಚಿಕ್ಕತನದಿಂದಲೂ ರಾಮಾಯಣದ ಪ್ರಭಾವ ರಾಜೇಂದ್ರಪ್ರಸಾದರ ಮೇಲೆ ಬಹಳ. ಹಳ್ಳಿಯಲ್ಲಿ ಅನಕ್ಷರಸ್ಥರೇ ಹೆಚ್ಚು. ಎಲ್ಲೋ ಒಬ್ಬಿಬ್ಬರಿಗೆ ಓದುಬರಹ ಬರುತ್ತಿತ್ತು. ಆದರೂ ಪ್ರತಿ ಸಂಜೆಯೂ ಎಲ್ಲರೂ ಸೇರುತ್ತಿದ್ದರು. ಯಾರೋ ಒಬ್ಬರು ರಾಮಾಯಣದ ಒಂದು

ಶ್ಲೋಕವನ್ನು ದನಿಯೆತ್ತಿ ಹೇಳುತ್ತಿದ್ದರು. ಉಳಿದವರೆಲ್ಲ ದನಿಗೂಡಿಸಿ ಜತೆಯಲ್ಲೇ ಹಾಡುತ್ತಿದ್ದರು. ಹೀಗೆ ದಿನವೂ ರಾಮಾಯಣ ಪಾಠ ನಡೆಯುತ್ತಿತ್ತು. ಅದು ಹಳ್ಳಿಯ ಜನರ ಮೇಲೆ ಒಳ್ಳೆಯ ಪ್ರಭಾವ ಬೀರಿತ್ತು. ಯಾವುದೇ ಹಬ್ಬವಾದರೂ ಜನ ಒಗ್ಗಟ್ಟಿನಿಂದ ಶ್ರದ್ಧೆಯಿಂದ, ನಿಷ್ಠೆಯಿಂದ ಕೆಲಸ ನಡೆಸುತ್ತಿದ್ದರು. ಅಲ್ಲಿ ಯಾರೂ ಕುಡಿಯುವ ಕೆಟ್ಟ ಅಭ್ಯಾಸಕ್ಕೆ ಬಲಿಬಿದ್ದಿರಲಿಲ್ಲ. ಅಷ್ಟೇ ಅಲ್ಲ, ಹಿಂದೂ ಮುಸಲ್ಮಾನರೆಂಬ ಭೇದ ಭಾವವೇ ಇರಲಿಲ್ಲ. ಹಳ್ಳಿಯ ದೊಡ್ಡ ಹಬ್ಬಗಳೆಂದರೆ ಹೋಲಿ, ದೀಪಾವಳಿ ಮತ್ತು ಮೊಹರಂ. ಇವುಗಳಲ್ಲಿ ಹಿಂದು ಮುಸಲ್ಮಾನರು ಜೊತೆಯಾಗಿಯೇ ಹಬ್ಬ ಮಾಡುತ್ತಿದ್ದರು. ಹೋಲಿಯಲ್ಲಿ ಉಳಿದ ಹಳ್ಳಿಗಳಲ್ಲಿ ಕುಡಿತ ಬಹಳ ಜೋರಾಗಿದ್ದರೂ ಜೀರಾದೇಯಿಯ ಸೌಭಾಗ್ಯದಿಂದ ಅಲ್ಲಿ ಅದರ ಸುಳಿವೂ ಇರಲಿಲ್ಲ. ಕಳ್ಳು ಕುಡಿಯುವುದು ಪಾಪವೆಂದು ಎಲ್ಲರೂ ನಂಬಿದ್ದರು. ಅಲ್ಲದೆ ರಾಜೇಂದ್ರಪ್ರಸಾದರ ಮನೆಯಲ್ಲಿ ಇನ್ನೂ ಒಂದು ಪ್ರತೀತಿಯಿತ್ತು. ಅವರ ವಂಶದಲ್ಲಿ ಯಾರಾದರೂ ಹೆಂಡ ಸೇವಿಸಿದರೆ ಅವರಿಗೆ ಕುಷ್ಠ ರೋಗ ಬರುವುದೆಂದು ನಂಬಿದ್ದರು. ಇದರಿಂದ ಅಲ್ಲಿನ ಕಾಯಸ್ಥ ಮನೆತನದವರೂ ಕೂಡ ಕುಡಿಯುತ್ತಿರಲಿಲ್ಲ. ಎಲ್ಲರೂ ಮದ್ಯವೆಂದರೆ ಬಹಳ ನೀಚ ಪದಾರ್ಥವೆಂದು ತಿಳಿದಿದ್ದರು.

ಹೀಗೆ ಪುರಾಣ ಕಥೆ, ರಾಮಲೀಲಾ, ರಾಮಾಯಣ ಪಾಠಗಳಿಂದ ಹಳ್ಳಿಯ ಧಾರ್ಮಿಕ ಜೀವನ ಯಾವಾಗಲೂ ಎಚ್ಚರವಾಗಿರುತ್ತಿತ್ತು. ಹೋಲಿ ಮೊಹರಂ ಹಬ್ಬಗಳಲ್ಲಿ ಹಿಂದು ಮುಸಲ್ಮಾನರೆನ್ನುವ ಭೇದವಿಲ್ಲದೆ ಎಲ್ಲರೂ ಭಾಗ ವಹಿಸುತ್ತಿದ್ದರು. ಪುರಿ ಬೆಲ್ಲಗಳನ್ನು ಒಬ್ಬರಿಂದೊಬ್ಬರು ತೆಗೆದುಕೊಂಡು ತಿನ್ನುತ್ತಿದ್ದರು. ಆದರೆ ಹಿಂದುಗಳು ಮುಸಲ್ಮಾನರಿಂದ ನೀರನ್ನು ಮಾತ್ರ ತೆಗೆದುಕೊಳ್ಳುತ್ತಿರಲಿಲ್ಲ. ಮುಸಲ್ಮಾನರೂ ಇದನ್ನು ತಪ್ಪೆಣಿಸುತ್ತಿರಲಿಲ್ಲ. ಅದು ಹಿಂದುಗಳ ಧರ್ಮವೆಂದು ಅವರಿಗೆ ಗೊತ್ತು. ಹಿಂದು ಹಬ್ಬಗಳಲ್ಲಿ ಅವರು ಶುಭಾಶಯಗಳನ್ನು ಕಳಿಸುವ ಪದ್ಧತಿಯೂ ಇತ್ತು. ಒಬ್ಬರೊಬ್ಬರಿಗೆ ಬಳುವಳಿ ಕೂಡ ಕೊಡುತ್ತಿದ್ದರು. ಹಿಂದೂ ಮುಸಲ್ಮಾನರದು ಮಧುರ ಬಾಂಧವ್ಯವಾಗಿತ್ತು!

ಆಗ ಹೆಚ್ಚಿಗೆ ಮೊಕದ್ದಮೆಗಳಾಗಲೀ, ಜಗಳಗಳಾಗಲಿ ಇರಲಿಲ್ಲ. ಏನಾದರೂ ಅಸಮಾಧಾನವೆದ್ದರೆ ಅದನ್ನು ಊರಿನ ಪಂಚಾಯಿತರೇ ತೀರ್ಮಾನಿಸುತ್ತಿದ್ದರು. ಅವರ ಮಾತೂ ಸರಿತೋರದಿದ್ದರೆ ಆಗ ಚೌಧುರಿಲಾಲರ ಬಳಿಗೆ ಬಂದು ತೀರ್ಮಾನಗೊಳಿಸಿಕೊಳ್ಳುತ್ತಿದ್ದರು. ಕೋರ್ಟು ಕಚೇರಿಗಳಿಗೆ ಹೆಚ್ಚಿಗೆ ಯಾರೂ ಹೋಗುವ ಅವಶ್ಯಕತೆಯೇ ಇರಲಿಲ್ಲ.

ಇಂತಹ ಹಳ್ಳಿಯ ಜೀವನದಲ್ಲಿ ರಾಜೇಂದ್ರ ಪ್ರಸಾದರು ತಮ್ಮ ಬಾಲ್ಯವನ್ನು ಕಳೆದರು. ಅದರ ಪ್ರಭಾವ ಅವರ ಜೀವನದ ಮೇಲೆ ಒಳ್ಳೆಯ ರೀತಿಯಲ್ಲೇ ಆಯಿತು. ಸತ್ಯಪ್ರಿಯತೆ, ನಿಷ್ಠೆ ಏಕತೆಗಳು ಮನಸ್ಸಿನಲ್ಲಿ ಬೇರೂರಿದವು.

---

೨

# ವಿದ್ಯಾಭ್ಯಾಸ

ಚೌಧುರಿಲಾಲರ ಕಾಲದಲ್ಲಿ ಇಂಗ್ಲಿಷ್ ಅಷ್ಟು ಪ್ರಚಾರದಲ್ಲಿರಲಿಲ್ಲ. ಆದರೆ ಅವರು ದಿವಾನಪದವಿ ಬಿಟ್ಟುಕೊಟ್ಟದು ಇಂಗ್ಲಿಷ್ ಬಾರದುದರಿಂದ. ಪಾರಸಿ ಭಾಷೆಯ ಜ್ಞಾನ ಎಲ್ಲರಿಗೂ ಅವಶ್ಯವಾಗಿ ಬೇಕಾಗಿತ್ತೆಂದು ಆ ಕಾಲದ ನಂಬಿಕೆ. ವಿದ್ಯಾಭ್ಯಾಸವೆಂದರೆ ಪಾರಸಿ ಸಂಸ್ಕೃತಗಳ ಜ್ಞಾನವೆಂದು ಆಗಿನ ತಿಳಿವಳಿಕೆ. ಬಾಬುರಾಜೇಂದ್ರ ಪ್ರಸಾದರ ತಂದೆ ಮಹದೇವ ಸಹಾಯರಿಗೆ ಈ ಎರಡು ಭಾಷೆಗಳಲ್ಲಿಯೂ ಪಾಂಡಿತ್ಯವಿತ್ತು. ಮನೆಯ ಮಕ್ಕಳಿಗೆ ಪಾರಸಿ ಕಲಿಸಲು ಒಬ್ಬರು ಮೌಲ್ವಿಯನ್ನು ಗೊತ್ತುಮಾಡಿದರು. ರಾಜೇಂದ್ರನಿಗೆ ಐದಾರು ವರುಷಕ್ಕೆ ಅಕ್ಷರಾಭ್ಯಾಸ ಆರಂಭಿಸಿದರು. ಈ ವೇಳೆಗಾಗಲೇ ಮಹೇಂದ್ರ ಇಂಗ್ಲಿಷ್ ಕಲಿಯಲು ಛಪರಾಕ್ಕೆ ಹೋಗಿ ಆಗಿತ್ತು. ಮಹೇಂದ್ರ ರಾಜೇಂದ್ರನಿಗಿಂತ ಎಂಟು ವರ್ಷ ದೊಡ್ಡವನು. ಈಗಾಗಲೇ ಅವನ ಮದುವೆಯೂ ಆಗಿತ್ತು.

ಮೌಲ್ವಿಯವರು ಮೂವರು ಹುಡುಗರಿಗೆ....ರಾಜೇಂದ್ರ ಮತ್ತು ಅವನ ನಂಟರ ಇಬ್ಬರು ಮಕ್ಕಳಿಗೆ—ಪಾರಸೀ ಕಲಿಸುತ್ತಿದ್ದರು. ಶಾಲೆಯ ಕೋಣೆ ರಾಜೇಂದ್ರನ ಮನೆಯಿಂದ ಕೊಂಚ ದೂರದ ಮನೆಯೊಂದರಲ್ಲಿ. ಬೆಳಿಗ್ಗೆ ಸೂರ್ಯೋದಯಕ್ಕೆ ಮೊದಲೇ ಎದ್ದು ಹುಡುಗರು ಶಾಲೆಗೆ ಹೋಗುತ್ತಿದ್ದರು. ಶಾಲೆಯ ಕೋಣೆಯಲ್ಲಿಯೇ ಮೌಲ್ವಿಯವರು ವಾಸಮಾಡುತ್ತಿದ್ದರು. ಒಂದು ಮೆತ್ತೆಯನ್ನೂ ಒರಗು ದಿಂಬನ್ನೂ ಹಾಕಿಕೊಂಡು ಅವರು ಕುಳಿತುಕೊಂಡು, ಹುಡುಗರನ್ನು ಎದುರಿಗೆ ಕೂರಿಸಿಕೊಂಡು ಪಾಠ ಹೇಳಿಕೊಡುತ್ತಿದ್ದರು. ಹಿಂದಿನ ಪಾಠವನ್ನೊಮ್ಮೆ ಹೇಳಿ ಮುಗಿಸಿದ ನಂತರ ಹೊಸ ಪಾಠದ ಆರಂಭ. ರಾಜೇಂದ್ರ ತನ್ನಿಬ್ಬರು ಸಹಪಾಠಿಗಳಿಗಿಂತ ಚುರುಕು ಬುದ್ಧಿಯವನು. ಬೇಗನೆ ಕಲಿಯುತ್ತಿದ್ದು ಬೆಳಗಿನ ಜಾವಕ್ಕೇ ಶಾಲೆಗೆ ಹೋಗಿ ಪಾಠ ಒಪ್ಪಿಸಿಬಿಡುತ್ತಿದ್ದ. ಹೊಸಪಾಠವನ್ನು ಮುಗಿಸುವ ವೇಳೆಗೆ ಬೆಳಕುಹರಿ

ಯುತ್ತಿತ್ತು. ಆಗ ಮನೆಯಿಂದ ಆಳು ಬಂದು ಮುಖ ತೊಳೆದು ಮನೆಗೆ ತಿಂಡಿ ತಿನ್ನಲು ಕರೆದೊಯ್ಯುತ್ತಿದ್ದ. ಅರ್ಧಗಂಟೆಯನಂತರ ಮತ್ತೆ ಶಾಲೆ. ಪುಸ್ತಕದ ಪಾಠವನ್ನು ಗಟ್ಟಿಮಾಡಿ ಹೇಳಿದನಂತರ ಹಲಗೆಯ ಮೇಲೆ ಬರೆಸುತ್ತಿದ್ದರು. ಅನಂತರ ಸ್ನಾನ ಊಟ ಇವುಗಳಿಗೆ ಒಂದೆರಡು ಘಂಟೆಯ ವಿರಾಮ. ಅನಂತರ ಸಂಜೆಯತನಕ ಪಾಠ. ಆಟಕ್ಕೆ ಎರಡು ಗಂಟೆಯ ವಿರಾಮ. ಮತ್ತೆ ದೀಪ ಹತ್ತಿಸಿಕೊಂಡು ಪಾಠ ಆರಂಭ. ಬೆಳಿಗ್ಗೆಯಿಂದ ಕಲಿತ ಪಾಠವನ್ನು ಒಪ್ಪಿಸಿದನಂತರ ಪುಸ್ತಕ ಮುಚ್ಚಿ ಮನೆಗೆ ಹೋಗುವುದು. ಪಾಠದ ಕಾಲದಲ್ಲಿ ನಡು ನಡುವೆ ಆಟಕ್ಕೆ ವಿರಾಮ ಸಿಗುತ್ತಿತ್ತು.

ರಾಜೇಂದ್ರ ಬಹಳ ಒಳ್ಳೆಯ ವಿದ್ಯಾರ್ಥಿ. ಪಾಠದಲ್ಲಿ ಉಳಿದಿಬ್ಬರಿಗಿಂತ ಬಹಳ ಮುಂದಾಗಿದ್ದ. ಆದರೆ ಸಂಜೆಯಾದೊಡನೆ ನಿದ್ರೆಬಂದು ಬಿಡುತ್ತಿತ್ತು. ತೂಕಡಿಸುವುದನ್ನು ಕಂಡು ಎಲ್ಲಿ ಮೌಲ್ವಿಯವರು ರೇಗಿ ಹೊಡೆಯುವರೋ ಎಂದು ಸದಾ ಹೆದರಿಕೆ ಇದ್ದೇಇತ್ತು. ಬೇಗನೆ ತಪ್ಪಿಸಿಕೊಳ್ಳಲು ಒಂದೆರಡು ಉಪಾಯಗಳನ್ನು ಸಹಪಾಠಿ ನಂಟರ ಮಗ ನಡೆಸುತ್ತಿದ್ದ. ಎಣ್ಣೆಬೇಗ ಮುಗಿಯುವಂತೆ ಬತ್ತಿಗೆ ಧೂಳು ಸೇರಿಸುವುದೋ, ಹೊರಗೆ ಹೋಗಿ ಬರುವೆನೆಂದು ಹೇಳಿ ಮನೆಗೆ ಓಡಿ ಹೋಗಿ ಆಳನ್ನು ಕರೆತರುವುದೋ–ಯಾವುದೋರೀತಿಯಲ್ಲಿ ರಾತ್ರಿಯ ಪಾಠ ಬೇಗ ಮುಗಿಯುತ್ತಿತ್ತು. ಹುಡುಗರಿಗೆ ಮೌಲ್ವಿಯವರಲ್ಲಿ ಬಹಳ ಪ್ರೇಮವಿತ್ತು. ಓದಿನಲ್ಲಿಯೂ ಬಹಳ ಆಸಕ್ತಿಯಿತ್ತು. ಎರಡೂವರೆ ವರ್ಷದಲ್ಲಿ ಪಾರಸಿಯಲ್ಲಿ ಒಳ್ಳೆಯ ಜ್ಞಾನ ಸಂಪಾದಿಸಿದರು. ಲೆಕ್ಕವನ್ನು ಕಲಿತರು. ಇಂಗ್ಲೀಷ್ ವಿದ್ಯಾಭ್ಯಾಸಕ್ಕಾಗಿ ಛಪರಾಕ್ಕೆ ಹೋಗುವ ಮುನ್ನ ಮೌಲ್ವಿಯವರಿಗೂ ರಾಜೇಂದ್ರನಿಗೂ ಬಹಳ ದುಃಖವಾಯಿತು. ಇಬ್ಬರಿಗೂ ಅಷ್ಟು ಹೊಂದಿಕೆಯಾಗಿ ಹೋಗಿತ್ತು.

ಮಹೇಂದ್ರ ಪ್ರಸಾದ್ ಮೊದಲು ಸೀವಾನದಲ್ಲಿದ್ದು ಅನಂತರ ಛಪರಾದ ಶಾಲೆ ಸೇರಿದ್ದ. ಸೀವಾನದಲ್ಲಿ ಪ್ರೌಢಶಾಲೆಯಿಲ್ಲದುದರಿಂದ ಛಪರಾದಲ್ಲಿಯೇ ಕಲಿಕೆಗಾಗಿ ನಿಲ್ಲಬೇಕಾಯಿತು. ರಾಜೇದ್ರನೂ ಛಪರಾದಲ್ಲಿಯೇ ಓದಬೇಕೆಂದು ತೀರ್ಮಾನವಾದನಂತರ ಚಿಕ್ಕಪ್ಪ ಜಗ

ದೇವಸಹಾಯ್ ಊರು ತೋರಿಸಲು ಒಮ್ಮೆ ರಾಜೇದ್ರನನ್ನು ಅಲ್ಲಿಗೆ ಕರೆದೊಯ್ದರು. ಆಗ ಊರು ನೋಡಿಕೊಂಡು ಹಿಂತಿರುಗಿದುದೇ ಹೊರತು ಶಾಲೆಗೆ ಸೇರಲಿಲ್ಲ. ಅದೇ ರಾಜೇಂದ್ರನ ಮೊದಲನೆಯ ರೈಲು ಪ್ರವಾಸ! ಈ ದಿನಗಳಲ್ಲಿಯೇ ಜಗದೇವಸಹಾಯ್ ತೀರಿಕೊಂಡರು! ನಂಟರೊಬ್ಬರ ಮನೆಯ ಮದುವೆಯಲ್ಲಿ ವರನ ಬಳಗದಲ್ಲಿ ಹೋದ ಜಗದೇವಸಹಾಯರಿಗೆ ಕಾಲರ ತಗಲಿತು. ಆಗ ವಾಸಿಯಾದರೂ ಊರಿಗೆ ಬಂದ ಹದಿನೈದು ದಿನಗಳಲ್ಲೇ ಮತ್ತೆ ಕಾಯಿಲೆಗಂಟು ಬಿದ್ದು ಸಂಜೆಯೇ ತೀರಿಹೋದರು. ಅವರ ಸಾವಿನಿಂದ ಮನೆಯಲ್ಲಿ ದೊಡ್ಡ ಕಳವಳ. ಆತಂಕ. ಚೌಧುರಿಲಾಲರಿಗೆ ಎಪ್ಪತ್ತಕ್ಕೂ ಮೇಲೆ ವಯಸ್ಸಾಗಿತ್ತು. ಜಗದೇವಸಹಾಯ್ ಇನ್ನು ನಾಲ್ವತ್ತೈದರ ಪ್ರಾಯದವರು. ಮನೆಯ ಕಾರುಬಾರನ್ನೆಲ್ಲಾ ನೋಡಿಕೊಳ್ಳುತ್ತಿದ್ದ ಅವರ ಸಾವಿನಿಂದ ಮನೆ ಅವ್ಯವಸ್ಥೆಗಿಳಿಯಿತು. ಈ ಸಾವಿನಿಂದ ರಾಜೇಂದ್ರಪ್ರಸಾದರ ಛಪರಾಪ್ರಯಾಣ ಕೊಂಚ ಮುಂದುವರಿಯಿತು.

ಅನಂತರ ಒಂದು ಒಂದೂವರೆ ವರ್ಷದನಂತರ ಛಪರಾಕ್ಕೆ ರಾಜೇಂದ್ರ ಹೋಗಿ ಶಾಲೆಗೆ ಸೇರಿಕೊಂಡ. ಮೂರುನಾಲ್ಕು ರೂಪಾಯಿ ಬಾಡಿಗೆಯ ಒಂದು ಸಣ್ಣ ಮನೆಯಲ್ಲಿ ಅಣ್ಣ ಮಹೇಂದ್ರನೊಂದಿಗೆ ರಾಜೇಂದ್ರ ಇರಲಾರಂಭಿಸಿದ. ಒಬ್ಬ ಸೇವಕ, ಒಬ್ಬ ಅಡಿಗೆಯುವನು ಅವರ ಸಹಾಯಕ್ಕೆ ಮನೆಯಲ್ಲಿದ್ದರು. ಜಿಲ್ಲಾಶಾಲೆಯಲ್ಲಿ ಅತಿಕೆಳಗಿನ ತರಗತಿಯಾದ ಎಂಟನೆಯ ತರಗತಿಗೆ ರಾಜೇಂದ್ರ ಸೇರಿದ. ಅಲ್ಲಿಯೇ ಇಂಗ್ಲೀಷ್ ಎ. ಬಿ. ಸಿ. ಡಿ. ಯನ್ನೂ ಸಂಸ್ಕೃತ ಅ. ಆ. ಇ. ಈ. ಯನ್ನು ರಾಜೇಂದ್ರ ಕಲಿಯಲಾರಂಭಿಸಿದುದು. ಮಹೇಂದ್ರ ಈಗಾಗಲೇ ಪ್ರವೇಶ ಪರೀಕ್ಷೆ-ಎಂದರೆ ಒಂದನೆಯ ತರಗತಿಗೆ ಬಂದುಬಿಟ್ಟಿದ್ದ. ರಾಜೇಂದ್ರನಿಗೆ ಮನೆಯಲ್ಲಿ ಬೇರೆ ಉಪಾಧ್ಯಾಯರನ್ನಿಟ್ಟಿರಲಿಲ್ಲ. ಶಾಲೆಯಲ್ಲಿ ಕಲಿತಿದ್ದಲ್ಲದೆ ಮತ್ತೇನಾದರೂ ತಿಳಿಯಬೇಕಾಗಿದ್ದಲ್ಲಿ ಅಣ್ಣನನ್ನೇ ಕೇಳಿ ತಿಳಿದುಕೊಳ್ಳಬೇಕಾಗಿತ್ತು. ಮನೆಯಲ್ಲಿ ವಿಶೇಷ ಅಧ್ಯಾಪಕರಿಲ್ಲದುದರಿಂದ ಶಾಲೆಯ ಪಾಠದಲ್ಲಿ ಸಂಪೂರ್ಣವಾಗಿ ಮನಸಿಟ್ಟು, ಗಮನಕೊಟ್ಟು ಕಲಿಯುವ ಒಳ್ಳೆಯ

ಅಭ್ಯಾಸ ರಾಜೇಂದ್ರನಲ್ಲಿ ಮೂಡಿಬಂದಿತು. ಆ ವರ್ಷದ ಕೊನೆಯ ಪರೀಕ್ಷೆಯಲ್ಲಿ ರಾಜೇಂದ್ರನಿಗೆ ಬಹಳ ಚೆನ್ನಾಗಿ ನಂಬರು ಬಂದಿತು. ತರಗತಿಯಲ್ಲೆಲ್ಲಾ ರಾಜೇಂದ್ರನೇ ಮೊದಲಿನವನಾದುದ ರಿಂದ ಮುಖ್ಯೋಪಾಧ್ಯಾಯರು ರಾಜೇಂದ್ರನಿಗೆ ಡಬ್ಬಲ್ ಪ್ರಮೋಷ್ಣ ಕೊಡುವ ಯೋಚನೆ ಮಾಡಿದರು.

ಮುಖ್ಯೋಪಾಧ್ಯಾಯರು ತರಗತಿಗೆ ಹೇಳಿಕಳಿಸಿ ರಾಜೇಂದ್ರ ನನ್ನು ಕರೆಸಿಕೊಂಡಾಗ ರಾಜೇಂದ್ರ ಥರ ಥರ ನಡುಗುತ್ತಿದ್ದ. ತಪ್ಪು ಮಾಡಿದವರನ್ನು ಶಿಕ್ಷಿಸಲು ಮಾತ್ರ ಮುಖ್ಯೋಪಾಧ್ಯಾಯರು ತಮ್ಮ ಬಳಿಗೆ ಕರೆಸಿಕೊಳ್ಳುತ್ತಿದ್ದರು. ಆದರೆ ಅವರ ಬಳಿಗೆ ಹೋದೊಡನೆ ರಾಜೇಂದ್ರನಿಗೆ ಎಲ್ಲಾ ಹೆದರಿಕೆಯೂ ದೂರವಾಯಿತು. "ಎಂಟನೆಯ ದರ್ಜೆಯಿಂದ ಆರನೆಯ ದರ್ಜೆಗೆ ಕಳುಹಿಸುತ್ತೇನೆ, ಹೋಗುವೆಯಾ?" ಎಂದು ಕೇಳಿದಾಗ ರಾಜೇಂದ್ರನಿಗೆ ಆನಂದ ಆಶ್ಚರ್ಯ. "ಅಣ್ಣನನ್ನು ಕೇಳಿ ಹೇಳುತ್ತೇನೆ" ಎಂದು ಅಣ್ಣನ ಬಳಿಗೆ ಓಡಿದ. ಒಂದು ತರಗತಿ ಯನ್ನು ಹಾರಿಸಿ ಮೇಲಿನ ತರಗತಿಗೆ ಹೋದರೆ ಎಷ್ಟೋ ವಿಷಯಗಳ ಜ್ಞಾನವೇ ಇರುವುದಿಲ್ಲವೆಂದು ಮಹೇಂದ್ರಪ್ರಸಾದ್ ತಿಳಿಯ ಹೇಳಿ ದರೂ, ಮುಖ್ಯೋಪಾಧ್ಯಾಯರು ರಾಜೇಂದ್ರನನ್ನು ಆರನೆಯ ತರ ಗತಿಗೆ ಉತ್ತೀರ್ಣಗೊಳಿಸಿದರು. ಆ ಶಾಲೆಯನ್ನು ಕೆಲವೇ ದಿನಗಳಲ್ಲಿ ಬಿಟ್ಟು ರಾಜೇಂದ್ರ ಪಾಟ್ನದ ಜೆ. ಕೆ. ಘೋಷ್ ಶಾಲೆಗೆ ಸೇರಿದ. ಮಹೇಂದ್ರ ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಪಾಟ್ನದ ಕಾಲೇಜು ಸೇರಿದುದರಿಂದ ರಾಜೇಂದ್ರನೂ ಅಣ್ಣನ ಜೊತೆಗೆ ಪಾಟ್ನಕ್ಕೆ ಬರಬೇಕಾಯಿತು. ಆಗ ರಾಜೇಂದ್ರನಿಗೆ ೧೦-೧೧ ವರ್ಷ. ಎರಡು ವರ್ಷ ಅಲ್ಲಿ ಕಳೆಯಿತು, ಮಹೇಂದ್ರ ಎಫ್.ಎ. ಪರೀಕ್ಷೆ ಮುಗಿಸಿದ. ರಾಜೇಂದ್ರ ನಾಲ್ಕನೆಯ ತರಗತಿಗೆ ಏರಿದ.

ಈ ನಡುವೆಯೇ ಚೌಧುರಿಲಾಲರೂ ತೀರಿಕೊಂಡುದು. ಈಗ ಮನೆಯಲ್ಲಿ ಮಹದೇವಸಹಾಯರೇ ಹಿರಿಯರು. ರಾಜೇಂದ್ರ ನಾಲ್ಕ ನೆಯ ತರಗತಿಗೆ ಬಂದು ಬೇಸಗೆಯ ರಜೆಗೆ ಊರಿಗೆ ಬಂದಾಗ ಅವನ ವಿವಾಹವನ್ನು ಮಾಡಿಬಿಟ್ಟರು. ಆಗ ರಾಜೇಂದ್ರನಿಗಿನ್ನೂ ಹನ್ನೆರಡು

ವರ್ಷ. ಈ ಮದುವೆಯ ಕಾಲದಲ್ಲಿ ಮನೆಯ ಹಣಕಾಸಿನ ಸ್ಥಿತಿ ಚೆನ್ನಾ
ಗಿರಲಿಲ್ಲ. ಮನೆಯಲ್ಲಿ ಸಾವುನೋವು, ಮಕ್ಕಳಿಗೆ ಪರಪೂರಿನಲ್ಲಿ ಓದಲು
ತಗಲುತ್ತಿದ್ದ ಖರ್ಚು, ಅಕಾಲವಾದದ್ದರಿಂದ ವಸೂಲಾಗದಿದ್ದ ಹುಟ್ಟು
ವಳಿ, ಇದೆಲ್ಲದರಿಂದ ಮನೆಯ ಸ್ಥಿತಿ ಹೇಳಿಕೊಳ್ಳುವಂತಿರಲಿಲ್ಲ. ಆದರೆ
ಮದುವೆಯೆಂದ ಮೇಲ್ಲೆ ಹೆಣ್ಣಿನಕಡೆಯವರು ಕೊಟ್ಟಂತೆಯೇ ದೊಡ್ಡ
ಅಂತಸ್ತಿನ ಗಂಡಿನ ಕಡೆಯವರೂ ನಗನಾಣ್ಯವನ್ನಿಡಬೇಕಾಗಿತ್ತು.
ವರನ ಬಳಗದವರು ಹೆಣ್ಣಿಗೆ ಕೊಟ್ಟು ತರುವುದರ ಸಂಪ್ರದಾಯವನ್ನು
ಎಂದಿನಂತೆಯೇ ನಡೆಸಬೇಕಾಗಿತ್ತು. ಅಲ್ಲದೆ ಮಹದೇವಸಹಾಯ
ಇದಿನ್ನೂ ಮನೆಯ ಯಜಮಾನರಾಗಿದ್ದುದರಿಂದ, ತಮ್ಮ ಯಜಮಾನಿಕೆ
ಯಲ್ಲಿ ಆಗುವ ಮೊದಲ ಮದುವೆಯನ್ನು ದೊಡ್ಡರೀತಿಯಲ್ಲಿ,
ವಿಜೃಂಭಣೆಯಿಂದ ನಡೆಸುವ ಆಸೆ ಬೇರೆ! ಅಲ್ಲದೆ ಚೆನ್ನಾಗಿ ಮಾಡ
ದಿದ್ದರೆ ಚೌಧುರಿಲಾಲರ ಮರಣದ ನಂತರ ಮನೆತನದ ಗೌರವ ಕುಗ್ಗಿ
ತೆಂದು ಜನ ಆಡಿಕೊಳ್ಳಬಹುದು. ಇದೆಲ್ಲ ಕಾರಣದಿಂದ ಮದುವೆ
ಅದ್ದೂರಿಯಾಗಿಯೇ ನಡೆಯಬೇಕೆಂದು ಮಹದೇವಸಹಾಯರ ಆಸೆ.
ವರನ ಮೆರವಣಿಗೆ ವಧುವಿನ ಮನೆಗೆ ಹೋಗುವಾಗ ಆನೆ, ಕುದುರೆಗಳ
ಸವಾರಿಯಾಗುವುದು ಸಂಪ್ರದಾಯ. ಆದರೆ ರಾಜೇಂದ್ರನ ಮದುವೆಯ
ದಿನ ಒಳ್ಳೆಯ ಲಗ್ನದದಿನ, ಆದ್ದರಿಂದ ಆದಿನ ಬಹಳ ವಿವಾಹಗಳು
ನೆರವೇರುತ್ತಿದ್ದುವು. ಸಿಕ್ಕಿದ ಒಂದು ಆನೆ ಕೂಡ ಸರಯೂ ನದಿಯನ್ನು
ದಾಟಲು ನಿರಾಕರಿಸಿ ಚಂಡಿ ಹಿಡಿದುದರಿಂದ ಆನೆಯಿಲ್ಲದೆಯೇ ಮೆರ
ವಣಿಗೆ ನಡೆಯಿತು! ಇದು ಮಹದೇವಸಹಾಯರಿಗೆ ಬಹು ಅಸಮಾ
ಧಾನದ ಸಂಗತಿ. ಎರಡು ದಿನದ ಪ್ರಯಾಣದ ನಂತರ ವರನ
ಬಳಗ ವಧುವಿನ ಮನೆ ತಲುಪಿತು, ಮಧ್ಯಾಹ್ನ ಬರಬೇಕಾದುದು
ರಾತ್ರಿ ಹನ್ನೊಂದು ಗಂಟೆಯವೇಳೆಗೆ ಸೇರಿತ್ತು. ವರ ರಾಜೇಂದ್ರ
ತನ್ನ ಪಾಲಕಿಯಲ್ಲಿ ಚೆನ್ನಾಗಿ ನಿದ್ರೆಹೋಗಿದ್ದ. ಹಾಗೆಯೇ ಅರೆನಿದ್ರಾ
ವಸ್ಥೆಯಲ್ಲೇ ವಿವಾಹದ ಎಲ್ಲಾ ವಿಧಿಗಳೂ ತೀರಿ, ಆರಾತ್ರಿ ರಾಜೇಂದ್ರ
ನಿಗೆ ಮದುವೆ ಆಗಿಹೋಯಿತು. ಆಗ ಏನೇನು ನಡೆಯಿತು, ಏನಾ
ಯಿತು ಎಂಬುದರ ಜ್ಞಾನವೇ ರಾಜೇಂದ್ರನಿಗಿಲ್ಲ. ಚಿಕ್ಕ ಹುಡುಗರು

ಆಟವಾಡುವಾಗ ಮದುವೆಯ ಆಟ ಆಡುವಂತೆ ಇದೂ ಎಂದು ಮನ ಸ್ಸಿಗೆ ತೋರಿತು. ವಿವಾಹದ ಮಹತ್ವವಾಗಲಿ, ಜವಾಬ್ದಾರಿಯಾಗಲೀ ಆತನಿಗೆ ತಿಳಿಯದು. ಮದುವೆಯನ್ನು ಗೊತ್ತುಮಾಡುವುದರಲ್ಲಾಗಲೀ, ಈ ವಿಧಿಗಳಲ್ಲಾಗಲೀ ಆತನ ವಿಚಾರ, ಅಭಿಪ್ರಾಯವನ್ನು ಯಾರೂ ಕೇಳಿರಲಿಲ್ಲ, ಪಂಡಿತರು, ಮನೆಯ ಹೆಂಗಸರು, ಅತ್ತೆಯ ಮನೆಯ ಸ್ತ್ರೀಯರು ಹೇಳಿದುದನ್ನು ಮಾಡಿದ. ಎಲ್ಲರೂ ರಾಜೇಂದ್ರನಿಗೆ ಮದುವೆಯಾಯಿತೆಂದು ಹಿಗ್ಗಿದರು. ಅದರ ಅರ್ಥವೊಂದೂ ರಾಜೇಂದ್ರನಿಗೆ ತಿಳಿಯದು. ಆದರೆ ಇಷ್ಟು ಮಾತ್ರ ಗೊತ್ತು. ಅತ್ತಿಗೆಯೊಬ್ಬಳು ತನ್ನ ಅಣ್ಣನ ಜೊತೆಗೆ ಬಂದಹಾಗೆ ಯಾವುದೋ ಹೆಣ್ಣು ಹುಡುಗಿ ತನ್ನ ಜತೆಗೂ ತಮ್ಮ ಮನೆಗೆ ಬರುವಳೆಂದಷ್ಟು ಮಾತ್ರ ತಿಳಿದಿತ್ತು! ಒಂದು ವರ್ಷದನಂತರ ಹೆಂಡತಿ ಮನೆಗೆ ಬಂದಳು.

ಆಗಿನ ಕಾಲದಲ್ಲಿ ಮನೆಯಲ್ಲಿ ಪರದೆಯ ಪದ್ಧತಿ ಬಹಳ ಜೋರಾಗಿತ್ತು. ಹೆಂಗಸರು ಮನೆಬಿಟ್ಟು ಹೊರಗೇ ಬರುತ್ತಿರಲಿಲ್ಲ. ಅವರ ಅಂಗಳದ ಕಡೆ ಗಂಡಸರು ಯಾರೂ ತಲೆಹಾಕುತ್ತಿರಲಿಲ್ಲ; ಸೇವಕರು ಕೂಡ ಆಕಡೆ ಹೋಗುವಂತಿರಲಿಲ್ಲ, ಅಡಿಗೆಯವನು ಅಡಿಗೆ ಮನೆಗೆ ಹೋಗಬೇಕಾದರೆ ಒಂದು ಕೂಗು ಹಾಕುತ್ತಿದ್ದ. ಕೂಡಲೇ ಹೆಂಗಸರೆಲ್ಲ ತಮ್ಮ ತಮ್ಮ ಕೋಣೆಗೆ ಸೇರಿಕೊಳ್ಳುತ್ತಿದ್ದರು; ಅನಂತರ ಅಡಿಗೆಯ ಮನೆಯನ್ನು ಸೇರಿಕೊಳ್ಳುತ್ತಿದ್ದ. ಹೊರಗೇನಾದರೂ ಅವನು ಬರಬೇಕಾದರೆ ಮತ್ತೆ ಕೂಗುಹಾಕಿ ಅವರನ್ನು ಎಚ್ಚರಿಸುತ್ತಿದ್ದ. ಗಂಡ ಹೆಂಡತಿ ಕೂಡ ಒಬ್ಬರ ಮುಖವನ್ನೊಬ್ಬರು ಕಾಣುವುದು ಅಪರೂಪವಾಗಿತ್ತು. ಮನೆಯಲ್ಲಿ ಹಿರಿಯರ ಅನುಮತಿಯಿಲ್ಲದೆ ಒಬ್ಬರನ್ನೊಬ್ಬರು ನೋಡುವುದೂ ಆಗುತ್ತಿರಲಿಲ್ಲ. ರಾಜೇಂದ್ರ ಹೆಚ್ಚುಕಾಲ ಊರಿಂದ ಹೊರಗೇ ಕಳೆಯುತ್ತಿದ್ದ, ರಜೆಯ ದಿನಗಳಲ್ಲಿ ಮಾತ್ರ ಊರಿನಲ್ಲಿರುತ್ತಿದ್ದುದು, ಆಗಲೂ ಪತ್ನಿಯ ಜತೆ ಸಿಗುತ್ತಿದ್ದುದು ಬಹಳ ಅಪರೂಪ!

ಮಹೇಂದ್ರ ಎಫ್. ಎ. ಉತ್ತೀರ್ಣನಾಗಿ ಕಲ್ಕತ್ತೆಯಲ್ಲಿ ಮೆಡಿಕಲ್ ಕಾಲೇಜಿನಲ್ಲಿ ಸೇರಲು ಹೊರಟಾಗ, ರಾಜೇಂದ್ರ ಪಾಟ್ನಾದ

ಶಾಲೆಯಿಂದ ಹಥುವಾ ಶಾಲೆಗೆ ವರ್ಗಮಾಡಿಸಿಕೊಂಡ. ಆದರೆ ಅಲ್ಲಿನ ಅರ್ಥವಿಲ್ಲದ ಉರು ಹೊಡೆಯುವ ರೀತಿ ಅವನಿಗೆ ಒಗ್ಗಲಿಲ್ಲ, ಸಾಗಲೂ ಇಲ್ಲ. ಮಹೇಂದ್ರನಿಗೆ ಮೆಡಿಕಲ್ ಕಾಲೇಜಿನಲ್ಲಿ ಸ್ಥಳ ಸಿಗದುದರಿಂದ ಪಾಟ್ನಾಕ್ಕೆ ಹಿಂತಿರುಗಿ ಬಿ.ಎ ಗೆ ಓದಲಾರಂಭಿಸಿದ, ಆಗ ರಾಜೇಂದ್ರ ಹಥುವಾಶಾಲೆಯಲ್ಲಿ ಆರು ತಿಂಗಳು ಕಳೆದು ಛಪರಾಶಾಲೆಗೆ ಮತ್ತೆ ಸೇರಿದ. ಅಧ್ಯಾಪಕರಿಗೆ ರಾಜೇಂದ್ರನಲ್ಲಿ ಬಹಳ ಪ್ರೀತಿ. ಬಹಳ ಚುರುಕು ಹುಡುಗ, ಎಲ್ಲರಿಗೂ ಮೊದಲನೆಯ ಸ್ಥಾನ ಪಡೆಯಬಹುದೆಂದು ಉಪಾಧ್ಯಾಯರು ಅವನಿಗೆ ಉತ್ತೇಜನ ಕೊಡುತ್ತಿದ್ದರು. ನಾಲ್ಕನೆಯ ತರಗತಿಯ ಪರೀಕ್ಷೆಯಲ್ಲಿ ರಾಜೇಂದ್ರನಿಗೆ ನಾಲ್ಕನೆಯ ಸ್ಥಾನ ಮಾತ್ರ ಸಿಕ್ಕಿತು. ಆದರೆ ಮರುವರ್ಷದ ಪರೀಕ್ಷೆಯಲ್ಲಿ ರಾಜೇಂದ್ರ ಮೊದಲನೆಯ ಸ್ಥಾನ ಗಳಿಸಿದ. ಪ್ರವೇಶ ತರಗತಿಗೆ ಬಂದಾಗಲಂತೂ ಅಧ್ಯಾಪಕರು ಚೆನ್ನಾಗಿ ಓದಬೇಕು, ಓದಿದರೆ ವಿಶ್ವವಿದ್ಯಾನಿಲಯಕ್ಕೇ ಮೊದಲನೆಯವನಾಗುವೆಯೆಂದು ಉತ್ತೇಜನ ಕೊಡುತ್ತಿದ್ದರು. ಆದರ ಮೊದಲ ಪರೀಕ್ಷೆಯಲ್ಲಿ ಎರಡೇ ದಿನ ಪ್ರಶ್ನೆಗೆ ಉತ್ತರ ಬರೆಯಲು ಸಾಧ್ಯವಾಯಿತು, ಮೂರನೆಯ ದಿನದ ವೇಳೆಗೆ ಪ್ಲೇಗಿನ ಗೆಡ್ಡೆ ತೋರಿಕೊಂಡು ಜ್ವರ ಬಂದಿತು. ಇದರಿಂದ ಮತ್ತೆರಡು ದಿನ ಪರೀಕ್ಷೆಗೆ ಕುಳಿತುಕೊಳ್ಳಲಾಗಲಿಲ್ಲ. ಆದರೂ ಮೊದಲೆರಡು ದಿನದ ನಂಬರೇ ಸಾಕಾಗಿತ್ತು.

ವಿದ್ಯಾರ್ಥಿವೇತನಗಳಲ್ಲಿ ತಿಂಗಳಿಗೆ೨೦ ರೂ. ೧೫ರೂ.ಮತ್ತು ೧೦ ರೂ. ಮೂರು ರೀತಿಯದಿತ್ತು. ವಿಶ್ವವಿದ್ಯಾನಿಲಯದಲ್ಲಿ ಮೊದಲ ಹತ್ತು ಸ್ಥಾನಪಡೆದವರಿಗೆ ೨೦ ರೂಪಾಯಿ ವಿದ್ಯಾರ್ಥಿ ವೇತನ ಸಿಗುತ್ತಿತ್ತು. ಸೆಲೆಕ್ಷನ್ನಿನಲ್ಲಿಉತ್ತೀರ್ಣನಾಗಿ ಅನಂತರ ಪಾಟ್ನಾಕ್ಕೆಹೋಗಿ ರಾಜೇಂದ್ರ ಪರೀಕ್ಷೆಗೆ ಕುಳಿತ. ೧೦ ರೂಪಾಯಿ ಅಥವಾ ೧೫ ರೂಪಾಯಿನ ವಿದ್ಯಾರ್ಥಿ ವೇತನ ಸಿಕ್ಕಿದರೆ ಸಾಕೆಂದು ಅವನ ಆಸೆ.

ಪಾಟ್ನಾದಲ್ಲಿ ಪರೀಕ್ಷೆ ಮುಗಿಸಿ ರಾಜೇಂದ್ರ ಊರಿಗೆ ಬಂದ. ಮಹೇಂದ್ರನೂ ರಜೆಯಾದುದರಿಂದ ಮನೆಗೆ ಬಂದಿದ್ದರು, ಆದರೆ ಈಗ ಒಂದು ಹೊಸ ಧ್ಯೇಯ ಅವರ ಜೀವಕ್ಕೆ ಕೂಡಿಬಂದಿತ್ತು. ಮಹೇಂದ್ರ

ಪ್ರಸಾದ್ ಅಲಹಾಬಾದಿನ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕಲ್ಕತ್ತೆಯಲ್ಲಿ ಎಂ.ಬಿ., ಬಿ.ಎಸ್. ಮಾಡಬೇಕೆಂದು ಕಲ್ಕತ್ತೆಗೆ ಬಂದಿದ್ದರು. ಈಗ ರಾಜೇಂದ್ರರೊಂದಿಗೆ ಅನೇಕ ವಿಷಯ ಗಳನ್ನು ಚರ್ಚಿಸುತ್ತಿದ್ದರು. ೧೯೦೫ ನೆಯ ವರ್ಷ. ಆಗಲೇ ಸ್ವದೇಶಿಯ ಮಾತು ಬಂದುದು. ಅಲಹಾಬಾದಿನಿಂದ ಬಂದ ಮಹೇಂದ್ರಪ್ರಸಾದ ರಿಗೆ ಸ್ವದೇಶಿಯ ಪ್ರೇಮ ಬಂದಿತ್ತು, ಸ್ವದೇಶೀ ಸಾಮಾನುಗಳನ್ನು ಅವರು ತಾವೂ ಉಪಯೋಗಿಸುತ್ತಿದ್ದುದಲ್ಲದೆ, ಮನೆಯಲ್ಲಿ ರಾಜೇಂದ್ರ ನಿಗೂ ತಂದು ಕೊಡುತ್ತಿದ್ದರು. ಆಗಿನಿಂದಲೇ ರಾಜೇಂದ್ರ ಸ್ವದೇಶೀ ಬಟ್ಟೆಯನ್ನು ತೊಡಲು ಆರಂಭಿಸಿದುದು. ಗಾಂಧೀಜಿಯವರು ಖಾದಿಯ ಮಾತೆತ್ತುವತನಕ ಬರಿಯ ಸ್ವದೇಶೀ ಬಟ್ಟೆಯನ್ನೇ ಉಪ ಯೋಗಿಸುತ್ತಿದ್ದರು. ಖದ್ದರಿನ ಚಳುವಳಿ ಆರಂಭವಾದೊಡನೆಯೇ ಖಾದಿಧಾರಣೆಯನ್ನು ಆರಂಭಿಸಿದರು. ಈ ಸ್ವದೇಶಿಯ ಮಾತು ಬರಿಯ ಬಟ್ಟೆಯೊಂದಕ್ಕೇ ಅಲ್ಲ, ಎಲ್ಲ ವಸ್ತುಗಳಿಗೂ ಅನ್ವಯಿಸುತ್ತಿತ್ತು. ಕಲ್ಕತ್ತೆಯಿಂದ ಎಲ್ಲ ಸಾಮಾನುಗಳಲ್ಲೂ ಸ್ವದೇಶೀ ಸಾಮಾನುಗಳನ್ನೇ ತರುತ್ತಿದ್ದರು. ಆದರೆ ಇವರಿಗೆ ತಿಳಿಯದಂತೆಯೇ ಎಷ್ಟೋ ವ್ಯಾಪಾರಿ ಗಳು ಪರದೇಶೀ ವಸ್ತುಗಳನ್ನೇ ಮೋಸದಿಂದ ಸ್ವದೇಶಿಯೆಂದು ಇವ ರಿಗೆ ಮಾರುತ್ತಿದ್ದರು. ಆದರೂ ರಾಜೇಂದ್ರ ಮಹೇಂದ್ರರ ಸ್ವದೇಶೀ ಪ್ರೇಮ ತಗ್ಗಲಿಲ್ಲ, ಅದು ಭದ್ರವಾಗಿ ಬೇರೂರಿತು.

ಪರೀಕ್ಷೆಯ ಫಲಿತಾಂಶ ನೋಡಿದರೆ ಮೊದಲನೆಯ ದರ್ಜೆಯಲ್ಲೇ ರಾಜೇಂದ್ರನಿಗೆ ಪಾಸಾಗಿತ್ತು. ಎರಡು ಮೂರು ದಿನದನಂತರ ವಿಶ್ವ ವಿದ್ಯಾನಿಲಯದಿಂದ ಒಂದು ತಂತಿ ಬಂದಿತು, ವಿಶ್ವವಿದ್ಯಾನಿಲಯಕ್ಕೇ ರಾಜೇಂದ್ರ ಮೊದಲನೆಯವನಾಗಿದ್ದ ! ಅನಂತರ ಕಲ್ಕತ್ತೆಯ ಪ್ರೆಸಿ ಡೆನ್ಸಿ ಕಾಲೇಜಿನಲ್ಲಿ ಸೇರುವುದೆಂದು ತೀರ್ಮಾನವಾಯಿತು.

ಮಹೇಂದ್ರಪ್ರಸಾದ್ ಈಗಾಗಲೇ ಕಲ್ಕತ್ತೆಯಲ್ಲಿ ಓದುತ್ತಿದ್ದರು. ಈಡನ್ ಹಿಂದೂ ಹಾಸ್ಟಲಿನಲ್ಲಿ ಇದ್ದುಕೊಂಡು ಡಫ್‌ಕಾಲೇಜಿನಲ್ಲಿ ಚರಿತ್ರೆಯ ಎಂ.ಎ., ಪರೀಕ್ಷೆಗೂ, ರಿಪನ್ ಕಾಲೇಜಿನಲ್ಲಿ ಬಿ.ಎಲ್., ಪರೀಕ್ಷೆಗೂ ಓದುತ್ತಿದ್ದರು. ರಾಜೇಂದ್ರಪ್ರಸಾದ್ ಕಲ್ಕತ್ತೆಗೆ ಬಂದು

ಅಣ್ಣನೊಂದಿಗೆ ಉಳಿದುಕೊಂಡರು. ಇದೇ ಕಲ್ಕತ್ತೆಗೆ ಅವರ ಮೊದಲ ಭೇಟಿ! ಅಲ್ಲಿಗೆ ಬರುವವೇಳೆಗೆ ಬಹಳ ತಡವಾಗಿದ್ದುದರಿಂದ ಕಾಲೇಜಿನಲ್ಲಿ ಸ್ಥಾನಸಿಗುವುದು ಬಹಳ ಕಷ್ಟವಾಯಿತು, ಹಾಸ್ಟಲಿನಲ್ಲಿಯೂ ಅಷ್ಟೇ! ಕೊನೆಗೆ ಅವರಣ್ಣನ ಜೊತೆಯಲ್ಲಿಯೇ ನಾಲ್ಕು ಜನರಿಗೆ ಬದಲು ರಾಜೇಂದ್ರಪ್ರಸಾದರೂ ಸೇರಿ ಐದು ಜನರಿರಲು ಅನುಮತಿಸಿಕ್ಕಿತು.

ಕಾಲೇಜಿನಲ್ಲಿ ಇಂಗ್ಲೀಷ್, ದ್ವಿತೀಯ ಭಾಷೆಯ ಜತೆಗೆ ಚರಿತ್ರೆ, ತರ್ಕಶಾಸ್ತ್ರ (Logic) ಗಣಿತ, ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರಗಳನ್ನು ಕಡ್ಡಾಯವಾಗಿ ಎಲ್ಲರೂ ಓದಬೇಕಾಗಿತ್ತು. ಭೌತಶಾಸ್ತ್ರವನ್ನು ಡಾಕ್ಟರ್ ಜಗದೀಶಚಂದ್ರಬೋಸರೂ, ರಸಾಯನ ಶಾಸ್ತ್ರವನ್ನು ಡಾಕ್ಟರ್ ಪಿ. ಸಿ. ರಾಯ್ ಅವರೂ ಹೇಳಿಕೊಡುತ್ತಿದ್ದರು. ಈ ಗುರುಗಳ ಗೆಳೆತನವನ್ನಲ್ಲದೆ ಹಲವಾರು ಮಂದಿ ಸಹಪಾಠಿಗಳ ನಿಕಟ ಸ್ನೇಹವನ್ನೂ ರಾಜೇಂದ್ರಪ್ರಸಾದ್ ಇಲ್ಲಿಸಂಪಾದಿಸಿದರು. ಕಾಲೇಜು ಸೇರಿದ ಕೆಲವೇ ದಿವಸಗಳಲ್ಲಿ ಹಿಂದೆಯೇ ಛಪರಾದಲ್ಲಿ ಮೈಗೆ ಅಂಟಿಕೊಂಡಿದ್ದ ಮಲೇರಿಯಾ ಜ್ವರ ಮತ್ತೆ ಹಿಂಸೆ ಕೊಡಲಾರಂಭಿಸಿತು ದಸರೆಯ ರಜೆಯತನಕ ಜ್ವರ ಕಾಡಿತು. ರಜೆಯಲ್ಲಿ ಊರಿಗೆ ಹೋದನಂತರವೇ ಕಾಯಿಲೆ ಗುಣವಾದುದು. ಮೈಸರಿಹೋದೊಡನೆಯೇ ಜೋರಿನಿಂದ ಓದಲು ಆರಂಭಿಸಿದರು. ತರಗತಿಯಲ್ಲಿ ಕಲಿತುದರ ಜತೆಗೆ ಹಲವಾರು ಪುಸ್ತಕಗಳನ್ನೋದಿ ವಿಷಯ ಸಂಗ್ರಹ ಮಾಡಿಕೊಳ್ಳುತ್ತಿದ್ದರು. ಪ್ರತಿಯೊಂದು ವಿಷಯದಲ್ಲಿಯೂ ತಾವು ಮೊದಲಸ್ಥಾನ ಪಡೆಯುವ ಹುಮ್ಮಸದಿಂದ ಬಹಳ ಬಿರುಸಿನಿಂದ ಅಭ್ಯಾಸ ನಡೆಸುತ್ತಿದ್ದರು. ಎಫ್. ಎ. ಮಾಡಿದ ಮೇಲೆ ವಿಜ್ಞಾನವನ್ನೋದಬೇಕೆಂದು ರಾಜೇಂದ್ರಪ್ರಸಾದರ ಆಸೆಯಿತ್ತು. ಆದರೆ ಗಣಿತಮಾತ್ರ ತಲೆಗೆ ಹತ್ತುತ್ತಿರಲಿಲ್ಲವಾದ್ದರಿಂದ ಆ ಯೋಚನೆ ಬಿಡಬೇಕಾಯಿತು. ಪರೀಕ್ಷೆಯಲ್ಲಿ ಕೂಡ ಅವರೆಷ್ಟೇ ಪರಿಶ್ರಮ ನಡಸಿದ್ದರೂ ವಿಜ್ಞಾನದಲ್ಲಿ ಎಲ್ಲರಿಗಿಂತಲೂ ಮೇಲಿನ ಸ್ಥಾನ ಅವರಿಗೆ ಸಿಗದೆ ಹೋಯಿತು. ಆದರೆ ಉಳಿದ ವಿಷಯಗಳಲ್ಲೂ, ಒಟ್ಟಿನಲ್ಲಿಯೂ ಮೊದಲನೆಯ ಸ್ಥಾನ ಸಿಕ್ಕಿತ್ತು. ಇಂಗ್ಲೀಷು,

ದ್ವಿತೀಯ ಭಾಷೆ, ಮತ್ತು ಉಳಿದ ವಿಷಯಗಳಲ್ಲಿ ಮೊದಲನೆಯ ಸ್ಥಾನ ಗಳಿಸಿದುದಕ್ಕೆ, ಒಟ್ಟಿನಲ್ಲಿ ಮೊದಲನೆಯವರಾದುದಕ್ಕೆ ಬೇರೆ ಬೇರೆ ವಿದ್ಯಾರ್ಥಿ ವೇತನಗಳು ದೊರಕಿದುವು. ವೇತನದ ರೂಪವಾಗಿ ತಿಂಗಳಿಗೆ ೮೦ ರೂಪಾಯಿ ಬರುತ್ತಿತ್ತು.

ಗಣಿತದ ಹೆದರಿಕೆಯಿಂದ ವಿಜ್ಞಾನವನ್ನು ಬದಿಗೊತ್ತಿ ರಾಜೇಂದ್ರ ಪ್ರಸಾದ್ ಬಿ.ಎ., ಗೆ ಸೇರಿದರು. ಇಂಗ್ಲಿಷ್, ಚರಿತ್ರೆ ಮತ್ತು ಅರ್ಥ ಶಾಸ್ತ್ರ ಮೂರರಲ್ಲಿ ಆನರ್ಸ್ ಮಾಡಿಕೊಳ್ಳುವ ತೀರ್ಮಾನ ಮಾಡಿಕೊಂಡು ಪಾಠಗಳನ್ನು ಕೇಳುತ್ತಿದ್ದರು. ಕೊಂಚ ದಿನಗಳು ಕಾಲೇಜಿನ ವ್ಯಾಸಂಗದಲ್ಲಿಯೇ ತಲ್ಲೀನರಾಗಿದ್ದರು. ಆದರೆ ಮೊದಲಿನಿಂದಲೂ ಪರೀಕ್ಷೆಗಳ ವಿಷಯಗಳಲ್ಲಿದ್ದ ಶ್ರದ್ಧೆ ಈಗ ಕಡಿಮೆಯಾಯಿತು. ಇದಕ್ಕೆ ಕಾರಣ ನೇರವಾಗಿ ರಾಜಕೀಯವಲ್ಲದಿದ್ದರೂ ಸಾಮಾಜಿಕ ಕಾರ್ಯದಲ್ಲಿ ಆಸಕ್ತಿ ಮೂಡಿ ಬಂದುದು ! ಶ್ರೀ ಸತೀಶಚಂದ್ರ ಮುಖರ್ಜಿಯವರು 'ಡಾನ್ ಸೊಸೈಟಿ' (Dawn Society) ಎಂಬ ಸಂಸ್ಥೆಯೊಂದನ್ನು ನಡೆಸುತ್ತಿದ್ದರು. ಈ ಸಂಸ್ಥೆಯಲ್ಲಿ ವಿದ್ಯಾರ್ಥಿಗಳು ಸದಸ್ಯರಾಗಿದ್ದರು. ಹಣವನ್ನೇನೂ ಕೊಡಬೇಕಾಗಿರಲಿಲ್ಲ. ಈ ಸಂಸ್ಥೆಯ ಉದ್ದೇಶ ವಿದ್ಯಾರ್ಥಿಗಳಿಗೆ ಓದಿನಲ್ಲಿ ಸಹಾಯ ಮಾಡುವುದು ಮತ್ತು ದೇಶದ ಸ್ಥಿತಿಗತಿಗಳ ವಿಷಯವಾಗಿ ತಿಳಿವಳಿಕೆ ಕೊಡುವುದು. ಈ ಸದಸ್ಯರಿಂದ ಕೊಂಚ ಸೇವೆಯನ್ನು ತೆಗೆದುಕೊಳ್ಳುತ್ತಿದ್ದರು. ಪ್ರತಿ ವಾರವೂ ಸಂಜೆ ಎರಡು ತರಗತಿಗಳನ್ನು ನಡೆಸಿ ಭಾಷಣಗಳನ್ನು ಕೊಡಿಸುತ್ತಿದ್ದರು. ಒಂದು ತರಗತಿ ಗೀತಾಪ್ರವಚನಕ್ಕೆ ಸೇರಿದುದು. ಒಬ್ಬ ಪಂಡಿತರು ಬಹಳ ಸಹಜವಾದ ರೀತಿಯಲ್ಲಿ ಗೀತೆಯನ್ನು ಓದಿ ಅರ್ಥ ಹೇಳುತ್ತಿದ್ದರು. ಮತ್ತೊಂದು ತರಗತಿಯಲ್ಲಿ ಸ್ವಯಂ ಸತೀಶ ಚಂದ್ರಮುಖರ್ಜಿಯವರೇ ಬೇರೆ ಬೇರೆ ವಿಷಯಗಳ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಭಾಷಣಮಾಡುತ್ತಿದ್ದರು. ಅಲ್ಲದೆ ಬೇರೆ ಬೇರೆ ಭಾಷಣಕಾರರನ್ನು ಕರೆಸಿ ದೇಶ ವಿದೇಶಗಳ ಬಗ್ಗೆ ಭಾಷಣ ಕೊಡಿಸುತ್ತಿದ್ದರು. ಇದರಿಂದ ವಿದ್ಯಾರ್ಥಿಗಳ ವಿಚಾರ ಜ್ಞಾನ ಹೆಚ್ಚಾಗುತ್ತಿತ್ತು. ಅಲ್ಲದೆ ಭಾಷಣದ ಸಾರಾಂಶವನ್ನು ಎಲ್ಲ ವಿದ್ಯಾರ್ಥಿಗಳೂ ಬರೆದು ಸತೀಶ

ಚಂದ್ರರಿಂದ ತಿದ್ದಿಸಿಕೊಳ್ಳುತ್ತಿದ್ದರಿಂದ ತಪ್ಪು ತಿಳುವಳಿಕೆಗೆ ಅವಕಾಶವೇ ಆಗುತ್ತಿರಲಿಲ್ಲ. ನೀತಿಶಕ್ತಿ ಬೆಳೆಯಲು ಅನುವಾಗುತ್ತಿತ್ತು. ಎಲ್ಲರಿಗಿಂತ ಒಳ್ಳೆಯ ವಿದ್ಯಾರ್ಥಿಗೆ ಸಂಸ್ಥೆಯಿಂದ ವಿದ್ಯಾರ್ಥಿ ವೇತನವು ಸಿಗುತ್ತಿತ್ತು. ಕ್ರಿಯಾತ್ಮಕ ರೂಪದ ಸೇವೆಯೆಂದರೆ ಸಂಸ್ಥೆಯಪರವಾಗಿ ಎರಡು ಪುಟ್ಟ ಅಂಗಡಿಗಳಿದ್ದವು. ಸ್ವದೇಶೀ ಬಟ್ಟೆಯನ್ನೇ ಮಾರುವುದೊಂದು, ಉಳಿದ ಸ್ವದೇಶೀ ಸಾಮಾನುಗಳನ್ನು ಮಾರುವುದೊಂದು. ಈ ಅಂಗಡಿಗಳನ್ನು ತೆರೆದು ವ್ಯಾಪಾರ ಮಾಡಿ, ಲೆಕ್ಕಪತ್ರ ಇಡುವ ಜವಾಬ್ದಾರಿಯೆಲ್ಲಾ ಸದಸ್ಯರದೇ! ರಾಜೇಂದ್ರಪ್ರಸಾದರು ಹೇಗೋ ಈ ಸಂಸ್ಥೆಯ ಭಾಷಣ ಕೇಳಲು ಹೋಗಿ ಮುಗ್ಧರಾದರು, ಸತೀಶಚಂದ್ರರು ಸ್ವಾಮಿ ವಿವೇಕಾನಂದರ ಸಹಪಾಠಿಗಳಾಗಿದ್ದವರು. ಸೇವಾಕಾಂಕ್ಷೆಯಿಂದ, ವಿದ್ಯಾರ್ಥಿಗಳ ಮನಸ್ಸು, ಜೀವನಗಳ ಸುಧಾರಣೆಯ ದೃಷ್ಟಿಯಿಂದ ಈ ಸಂಸ್ಥೆಯನ್ನು ತೆಗೆದು ನಡೆಸಿಕೊಂಡು ಬರುತ್ತಿದ್ದರು. ರಾಜೇಂದ್ರಪ್ರಸಾದರು ಈ ಸಂಸ್ಥೆಯ ಸದಸ್ಯರಾದರು. ಆ ವರ್ಷ ವಿದ್ಯಾರ್ಥಿ ವೇತನ ಅವರಿಗೆ ದೊರಕಿತು. ಈ ಸಂಸ್ಥೆಯೇ ಅಲ್ಲದೆ ಬಿಹಾರಿನ ವಿದ್ಯಾರ್ಥಿಗಳು ಬಿಹಾರೀ ಸಂಸ್ಥೆಯೊಂದನ್ನು ಸ್ಥಾಪಿಸಿದ್ದರು. ವಾರಕ್ಕೊಮ್ಮೆ ಸೇರಿ ಚರ್ಚೆಗಳು, ಭಾಷಣಗಳನ್ನು ನಡೆಸುತ್ತಿದ್ದರು.

ಈ ಎಲ್ಲ ಪ್ರವೃತ್ತಿಗಳಿದ್ದರೂ ಅವುಗಳಿಗೆ ಒಂದು ನಟ್ಟ ಉದ್ದೇಶವಿರಲಿಲ್ಲ. ನಿಯಮಿತ ಕಾರ್ಯಕ್ರಮ ಇರಲಿಲ್ಲ. ರಾಜೇಂದ್ರಪ್ರಸಾದರು ಪತ್ರಿಕೆಗಳನ್ನು ಓದುತ್ತಿದ್ದರು ಕಾಂಗ್ರೆಸ್ಸಿನ ಹೆಸರನ್ನು ಕೇಳಿದ್ದರು. ಅಲ್ಲಿಯ ವಾರ್ಷಿಕ ಸಭೆಗಳ ಭಾಷಣಗಳನ್ನೆಲ್ಲ ಆಸ್ಥೆಯಿಂದ ಓದುತ್ತಿದ್ದರು. ಸಾರ್ವಜನಿಕ ಸಭೆಗಳಲ್ಲಿ ಭಾಷಣಗಳಾದರೆ ಕೇಳಲು ಹೋಗುತ್ತಿದ್ದರು. ಆದರೂ ಡಾನ್ ಸೊಸೈಟಿಯಲ್ಲೇ ಅವರದು ಹೆಚ್ಚು ಪ್ರೇಮ. ಸ್ವದೇಶಿಯ ಪ್ರೇಮವನ್ನು ಅಣ್ಣ ಮಹೇಂದ್ರಪ್ರಸಾದ್ ಹಿಂದೆಯೇ ಹುಟ್ಟಿಸಿದ್ದರು; ಅದು ಈ ಸಂಸ್ಥೆಯ ಕಾರಣದಿಂದ ಬಲವಾಯಿತು. ಈ ಸಂಸ್ಥೆಯ ಪ್ರಭಾವದಿಂದ ಸತೀಶ ಚಂದ್ರ

ಮುಖರ್ಜಿಯವರ ಉತ್ತೇಜನದಿಂದ ಮನಸ್ಸಿನಲ್ಲಿ ಈತನಕ ಹುದುಗಿದ್ದ ವಿಚಾರಗಳೆಲ್ಲ ಬೆಳಗತೊಡಗಿದುವು- ಭವಿಷ್ಯದ ವಿಚಾರವೂ ಮನಸ್ಸಿನಲ್ಲಿ ಸುಳಿಯಹತ್ತಿತು.

---

೩

# ರಾಜಕೀಯದಲ್ಲಿ ಮೊದಲ ಹೆಜ್ಜೆ ಮತ್ತು ವಕೀಲವೃತ್ತಿ.

೧೯೦೪ ರಲ್ಲಿ ರಾಜೇಂದ್ರಪ್ರಸಾದರು ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿದರು. ೧೯೦೫ ರಲ್ಲಿಯೇ ವಂಗಭಂಗದ ಆಂದೋಲನ ವಾದುದು. ರಾಜೇಂದ್ರಪ್ರಸಾದರು ಎಲ್ಲ ಸಭೆಗಳಲ್ಲೂ ಭಾಗ ವಹಿಸು ತ್ತಿದ್ದರು. ೧೯೦೫ ರ ಆಗಸ್ಟ್ ೭ ನೆಯ ತಾರೀಕಿನ ಸಭೆಯಲ್ಲಿ ವಿದೇಶೀ ವಸ್ತುಗಳ ಬಹಿಷ್ಕಾರ, ಸ್ವದೇಶೀ ವಸ್ತುಗಳನ್ನೇ ಉಪಯೋಗಿಸುವ ತೀರ್ಮಾನ ಮಾಡಿದರು. ರಾಜೇಂದ್ರರಿಗೆ ಇದೇನೂ ಹೊಸದಲ್ಲ. ಆದರೆ ಉಳಿದ ವಿದ್ಯಾರ್ಥಿಗಳಿಗೆ ಈ ಸ್ವದೇಶೀ ಪ್ರಚಾರದಿಂದ ಜಾಗೃತಿ ಯುಂಟಾಯಿತು, ಹೊಸ ಉತ್ಸಾಹ ಹೊಸ ತೇಜಸ್ಸು ಕೂಡಿಕೊಂ ಡುವು. ಆಗಿನ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದವರು ವಿಪಿನಚಂದ್ರ ಪಾಲ್, ಅರವಿಂದಘೋಷ್, ಎ. ಚೌಧುರಿ, ಸುರೇಂದ್ರಬಾಬು ಮುಂತಾದವರು. ಈ ಆಂದೋಲನದಿಂದ ವಿದ್ಯಾರ್ಥಿಗಳಲ್ಲಿ ರಾಜ ಕೀಯ ಜಾಗೃತಿ ಬಂದಿತು ಹೊಸ ವಿಚಾರಗಳು ಮೂಡಿದುವು.

ಆಗ ನಡೆದ ಒಂದು ಸಣ್ಣ ಘಟನೆ ವಿದ್ಯಾರ್ಥಿಗಳ ಮನಸ್ಸಿನ ಅರೆತಿಳಿವನ್ನು ಚೆನ್ನಾಗಿ ಪ್ರತಿ ಬಿಂಬಿಸುತ್ತದೆ. ರಾಜೇಂದ್ರ ಮೊದಲಿ ನಿಂದಲೂ ಸ್ವದೇಶೀ ವಸ್ತುಗಳನ್ನೇ ಉಪಯೋಗಿಸುತ್ತಿದ್ದರು. ಆದರೆ ತರಗತಿಯಲ್ಲಿ ಪಾಠಪ್ರವಚನವನ್ನು ಸೀಸದಕಡ್ಡಿಯಲ್ಲಿ ಬರೆದುಕೊಂ ಡರೆ ಕಲಸಾಗಿ ಹೋಗಿಬಿಡುವುದೆಂದು ಶಾಯಿಯಲ್ಲಿ ಬರೆದುಕೊಳ್ಳು ತ್ತಿದ್ದರು. ಅದಕ್ಕಾಗಿ ಹೊಸದಾಗಿ ಬಂದಿದ್ದ ಸ್ಟೈಲೋಪೆನ್ (stylopen)ಒಂದನ್ನು ಕೊಂಡುಕೊಂಡರು. ಅದು ವಿದೇಶೀ ವಸ್ತು. ಅದನ್ನು ಮಾರುವ ಅಂಗಡಿಯು ವಿದೇಶೀಯರದೇ. ಇದನ್ನು ತಿಳಿದ ಉಳಿದ ವಿದ್ಯಾರ್ಥಿಗಳು ಬಂದು ರಾಜೇಂದ್ರರನ್ನು ಕೆಣಕಿದರು; ಅವರ ಲ್ಲೊಬ್ಬ ಅದೇ ಇನ್ನೂ ವಿದೇಶೀ ಬಟ್ಟೆಯಲ್ಲಿ ಹೊಸ ಉಡುಪು ಹೊಲಿಸಿ ಪೆಟ್ಟಿಗೆಯಲ್ಲಿಟ್ಟದ್ದವನು, ಮತ್ತೊಬ್ಬ ತಾನು ಬರೆಯಲು ಇಟ್ಟು

ಕೊಂಡಿದ್ದ ಕಾಗದ ಕೂಡ ವಿದೇಶೀವಸ್ತು. ಇದು ರಾಜೇಂದ್ರರಿಗೆ ಗೊತ್ತು. ನಾವೆಲ್ಲರೂ ನಮ್ಮ ಬಳಿಯಿರುವ ಎಲ್ಲ ವಿದೇಶೀ ವಸ್ತುಗಳನ್ನು ಬೆಂಕಿಗೆ ಹಾಕಿಬಿಡೋಣವೆಂದು ರಾಜೇಂದ್ರರು ಸೂಚಿಸಿದರು. ಅವರ ಟ್ರಂಕು ಪೆಟ್ಟಿಗೆ ತೆಗೆದರೆ ಅಲ್ಲಿದ್ದ ಎಲ್ಲ ವಸ್ತುಗಳೂ ಸ್ವದೇಶಿಯವೇ ! ಉಳಿದವರ ಬಳಿ ವಿದೇಶೀ ಬಟ್ಟೆಗಳೂ ಮತ್ತಿತರ ಪದಾರ್ಥಗಳೂ ಇದ್ದುವು. ಅವುಗಳನ್ನೆಲ್ಲ ಬೆಂಕಿಗೆ ಹಾಕಬೇಕೆಂದು ಈತನಕ ಅವರೆಲ್ಲರಿಗೂ ತೋಚಿರಲಿಲ್ಲ. ಸ್ವದೇಶಿ ಚಳುವಳಿಯೆಂದರೆ ಹೆಸರಿಗೆ ಒಂದೆರಡು ಬಟ್ಟೆಯನ್ನು ಸ್ವದೇಶಿಯುದನ್ನೇ ಉಪಯೋಗಿಸುವುದೆಂದು ಅವರು ಬಗೆದಿದ್ದರು. ಈ ಅರೆತಿಳಿವಳಿಕೆಯಿದ್ದರೂ ವಿದ್ಯಾರ್ಥಿ ಜೀವನದಲ್ಲಿ ವಂಗಭಂಗದ ಆಂದೋಲನ ಜಾಗೃತಿಯನ್ನು, ಎಚ್ಚರವನ್ನು ತಂದಿತು. ಆದರೆ ಆಗ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಗೆ ಬಹಿಷ್ಕಾರ ಹಾಕಬೇಕೆಂದು ಯಾರೂ ಸೂಚಿಸಲಿಲ್ಲ. ಈ ಬಹಿಷ್ಕಾರದ ಯೋಚನೆ ಮೊತ್ತಮೊದಲಿಗೆ ಬಂದುದು ೧೯೨೦-೧೯೨೧ ರ ಸತ್ಯಾಗ್ರಹದ ವೇಳೆಯಲ್ಲಿ. ಹೀಗಾಗಿ ೧೯೦೫ರ ವಂಗಭಂಗದ ಚಳುವಳಿಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಸಹಾನುಭೂತಿಯೂ ಹೊರಗಿನದೇ ಆಗಿತ್ತು. ಯಾರೂ ಚಳುವಳಿಯಲ್ಲಿ ಒಳಹೊಕ್ಕು ಭಾಗವಹಿಸಲಿಲ್ಲ. ರಾಜೇಂದ್ರಪ್ರಸಾದರೂ ಅಷ್ಟೇ !

ಈ ನಡುವೆ ಸಮಾಜಸುಧಾರಣೆಯ ಘಟನೆಯೊಂದು ನಡೆಯಿತು. ೧೯೦೮ರ ಬೇಸಿಗೆಯ ರಜೆಯಲ್ಲಿ ರಾಜೇಂದ್ರ, ಮಹೇಂದ್ರರಿಬ್ಬರೂ ಊರಿಗೆ ಹಿಂತಿರುಗಿದ್ದರು. ಆಗ ಕಾಯಸ್ಥರಲ್ಲಿ ಸಮುದ್ರಯಾನ ಮಾಡಿದ್ದವರೆಂದರೆ ಸಚ್ಚಿದಾನಂದ ಸಿಂಹರೊಬ್ಬರೇ. ಅವರೂ ವಿದೇಶಯಾತ್ರೆ ಮಾಡಿ ಬಂದು ಹತ್ತು ವರ್ಷಗಳಾಗಿ ಹೋಗಿತ್ತು. ಅವರು ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಜಾತಿಯಿಂದ ಬೇರೆಯಾಗಿಸಲ್ಪಟ್ಟಿದ್ದರು. ಈಗ ಮತ್ತೊಬ್ಬರು ವಿದೇಶಯಾತ್ರೆ ಮುಗಿಸಿಬಂದರು. ಡಾಕ್ಟರ್ ಗಣೇಶಪ್ರಸಾದರು ವಿದೇಶಕ್ಕೆ ಹೊರಡುವಾಗಲೇ ತಾವು ಹಿಂದಿರುಗಿದೊಡನೆ ಜಾತಿಬಂಧನವನ್ನೊಪ್ಪುವುದಾಗಿ ತಿಳಿಸಿದ್ದರು. ವಿದೇಶದಲ್ಲಿ ಕೂಡ ಅವರು ಬಹಳ ಸರಳ

ಜೀವನವನ್ನೇ ನಡೆಸಿದ್ದರು. ಮಾಂಸ, ಮದ್ಯಗಳನ್ನು ಮುಟ್ಟಿ ರಲಿಲ್ಲ. ಅವರು ವಿದೇಶದಿಂದ ಹಿಂದಿರುಗಿದೊಡನೆ ಎರಡು ಪಂಗಡಗಳಾದುವು. ಒಂದು ಸುಧಾರಕರ ತಂಡ. ಡಾಕ್ಟರ್ ಗಣೇಶ ರನ್ನು ಜಾತಿಗೆ ಪುನಃ ಸೇರಿಸಿಕೊಳ್ಳಬೇಕೆಂಬುದು ಇವರವಾದ. ಮತ್ತೊಂದುಪಂಗಡ ಪೂರ್ವಾಚಾರಿಗಳದು. ಡಾಕ್ಟರ್ ಗಣೇಶರನ್ನು ಜಾತಿಯಿಂದ ಹೊರಗೆ ಹಾಕುವ ಇಚ್ಛೆ ಇವರದು. ಸುಧಾರಕರ ಗುಂಪಿನವರು ಇಪ್ಪತ್ತು-ಇಪ್ಪತ್ತೈದು ಜನ ಡಾಕ್ಟರ್ ಗಣೇಶರ ಮನೆಯಲ್ಲಿ ಊಟ ಮಾಡಿದರು. ಅವರೆಲ್ಲರನ್ನೂ ಜಾತಿಯಿಂದ ಹೊರಗೆ ಹಾಕಿ, ಅವರೊಂದಿಗೆ ವಿವಾಹಸಂಬಂಧ ನೀರುನಿಡಿಗಳ ಸಂಬಂಧ ಬಿಡಬೇಕೆಂದು ಸನಾತನಿಗಳು ತೀರ್ಮಾನಿಸಿದರು. ಈ ಜಾತಿಬಾಹಿರರಾದ ಸುಧಾರಕರಲ್ಲಿ ರಾಜೇಂದ್ರ, ಮಹೇಂದ್ರರಿಬ್ಬರೂ ಸೇರಿದ್ದರು. ಅವರ ತಂದೆಯೇ ಅವರನ್ನು ಆ ಭೋಜನಕೂಟಕ್ಕೆ ಕಳಿಸಿದ್ದರು. ಇದರಿಂದ ಬಹಳ ಮಂದಿಗೆ ಅಸಮಾಧಾನವಾಯಿತು. ರಾಜೇಂದ್ರರ ಭಾವನಂತೂ ರೇಗಿ ತಮ್ಮ ಸಂಬಂಧ ಕಡಿದುಹೋಗುವು ದೆಂದೂ, ಅವರು ಪ್ರಾಯಶ್ಚಿತ್ತಮಾಡಿಕೊಳ್ಳಬೇಕೆಂದೂ ಬರೆದರು. ಆದರೆ ಮಹದೇವಸಹಾಯರು ಇದಕ್ಕೆಲ್ಲ ಜಗ್ಗಲಿಲ್ಲ. ತಾವು ಯಾವ ತಪ್ಪನ್ನೂ ಮಾಡಲಿಲ್ಲ. ಮಾಡಿದುದನ್ನು ಇಲ್ಲವೆಂದು ಹೇಳುವ ಅಪ ರಾಧ ಅವರಿಂದ ಆಗುವಂತಿರಲಿಲ್ಲ. ಪ್ರಾಯಶ್ಚಿತ್ತದ ಮಾತು ನೋಡಿ ಕೊಳ್ಳೋಣ ಎಂದು ಉತ್ತರ ಬರೆದರು. ಈ ಸತ್ಯಪ್ರಿಯತೆಯೇ ರಾಜೇಂದ್ರರ ಜೀವನದಲ್ಲೂ ಹಾಸುಹೊಕ್ಕಾಗಿ ಬೆಳೆಯಿತು. ಈ ಸಮು ದ್ರಯಾನದ ಸುಧಾರಣೆಯ ವಿರೋಧ ಬಹುಕಾಲ ಉಳಿಯಲಿಲ್ಲ. ಕೆಲವು ವರ್ಷಗಳಲ್ಲಿ ತಾನೇತಾನಾಗಿ ಸುಧಾರಣೆಯನ್ನು ಎಲ್ಲರೂ ಒಪ್ಪಿ ಕೊಂಡರು. ನಿರೋಧ ಕಾಲು ತೆಗೆಯಿತು !

ಬಿ.ಎ. ಮುಗಿದನಂತರ ರಾಜೇಂದ್ರರು ಕಲ್ಕತ್ತೆಯಲ್ಲೇ ಎಂ.ಎ. ಮತ್ತು ಬಿ.ಎಲ್. ಪರೀಕ್ಷೆಗಳಿಗೆ ಓದಲಾರಂಭಿಸಿದರು. ಆಗ ಸ್ವದೇಶೀ ವಸ್ತುಗಳ ಚಳುವಳಿ ಬಹಳ ಜೋರಿನಿಂದ ನಡೆಯುತ್ತಿತ್ತು. ಬಂಗಾ ಲದ ವಿದ್ಯಾರ್ಥಿಗಳು ಬಹಳ ಉತ್ಸಾಹದಿಂದ ಈ ಚಳುವಳಿಯಲ್ಲಿ

ಭಾಗವಹಿಸುವುದನ್ನು ಕಂಡು, ಬಿಹಾರಿನ ವಿದ್ಯಾರ್ಥಿಗಳನ್ನು ಕೂಡಿಸಿ ಒಂದು ಸಮ್ಮೇಳನ ನಡೆಸಿ, ಈ ಕಾರ್ಯದಲ್ಲಿ ನೆರವಾಗುವುದು ಸರಿಯೆಂದು ರಾಜೇಂದ್ರರಿಗೆ ತೋರಿತು. ಈ ಯೋಚನೆಯನ್ನು ಹಿರಿಯರೂ, ವಿದ್ಯಾರ್ಥಿಗಳೂ ಆನಂದದಿಂದ ಸ್ವಾಗತಿಸಿದರು. ಪಾಟ್ನಾದಲ್ಲಿ ಮೊದಲ ಸಮ್ಮೇಳನವಾಗಬೇಕೆಂದೂ, ಪ್ರಸಿದ್ಧ ಬಾರಿಸ್ಟರ್ ಷರೀಫುದ್ದೀನರು ಅಧ್ಯಕ್ಷರಾಗಬೇಕೆಂದೂ ತೀರ್ಮಾನವಾಯಿತು. ಪಾಟ್ನಾ ಕಾಲೇಜಿನ ದೊಡ್ಡ ಹಾಲಿನಲ್ಲಿ ಮೊದಲಸಮ್ಮೇಳನ ನಡೆಯಿತು. ಸಮ್ಮೇಳನದ ಗುರಿಯನ್ನು ರಾಜೇಂದ್ರರು ಭಾಷಣದಲ್ಲಿ ತಿಳಿಸಿದರು. ಬಿಹಾರಿನ ಎಲ್ಲ ಶಾಲಾಕಾಲೇಜುಗಳಲ್ಲಿಯೂ ಸಮ್ಮೇಳನದ ಅಂಗ ಸಂಸ್ಥೆಗಳಾಗಿ ವಿದ್ಯಾರ್ಥಿ ಸಂಘಗಳಿರಬೇಕೆಂದು ತೀರ್ಮಾನವಾಯಿತು. ವಿದ್ಯಾರ್ಥಿಗಳ ಪ್ರತಿನಿಧಿಗಳೊಂದಿಗೆ ಒಂದು ಸ್ಥಾಯಿಸಮಿತಿಯೂ ಚುನಾಯಿಸಲ್ಪಟ್ಟಿತು. ಈ ಸಮ್ಮೇಲನ ರಾಜಕೀಯದಲ್ಲಿ ಭಾಗವಹಿಸಬೇಕೇ ಬೇಡವೆ ಎಂಬುದೊಂದು ದೊಡ್ಡ ಸಮಸ್ಯೆಯಾಗಿ ಕುಳಿತಿತು. ಕೆಲವರು ರಾಜಕೀಯದಲ್ಲಿ ಭಾಗವಹಿಸಲೇಬೇಕೆಂದು ಹಟ ಹಿಡಿದರು. ಆದರೆ ಹೆಚ್ಚುಮಂದಿ ಅದನ್ನು ವಿರೋಧಿಸಿದರು. ಕೊನೆಗೆ ರಾಜಕೀಯದಲ್ಲಿ ರಾಷ್ಟ್ರವಾದಿ ಗುಂಪುಗಳಲ್ಲಿಯೇ ಆಗಲಿ ಅಥವಾ ರಾಜಭಕ್ತಿ ಗುಂಪುಗಳಲ್ಲಿಯೇ ಆಗಲಿ ಸಮ್ಮೇಲನ ಸೇರಲಾಗದೆಂದು ತೀರ್ಮಾನವಾಯಿತು. ಆಗಿನ ಸ್ಥಿತಿಗತಿಗೆ ಇದು ಬಹಳ ಬುದ್ಧಿವಂತ ತೀರ್ಮಾನವೆಂದೇ ಹೇಳಬೇಕು- ಸಾರ್ವಜನಿಕ ಜೀವನವೆಂಬುದು ಇರಲೇ ಇಲ್ಲ. ಬಿಹಾರ ಇನ್ನೂ ಬಂಗಾಲದ ಭಾಗವೇ ಆಗಿತ್ತು. ವಿದ್ಯಾರ್ಥಿಗಳಿಗೆ ಹೊರಗಿನ ವಿಷಯ ಏನೇನೂ ತಿಳಿದಿರಲಿಲ್ಲ. ಕಾಂಗ್ರೆಸ್ಸಿನ ಪರವಾಗಿ ವಿಶ್ವಾಸವಿದ್ದರೂ ಬಹಳ ಇರಲಿಲ್ಲ. ಅಷ್ಟೇಅಲ್ಲ, ಬಿಹಾರಿನಲ್ಲಿ ಪ್ರತ್ಯೇಕ ಪ್ರಾಂತೀಯ ಕಾಂಗ್ರೆಸ್ ಸಮಿತಿಯಾಗಲಿ, ಮತ್ತಾವರಾಜಕೀಯ ಸಂಸ್ಥೆಯಾಗಲಿ ಇರಲಿಲ್ಲ. ಭಾರತದಲ್ಲೆಲ್ಲಾ ಬೀಹಾರ್ ವಿದ್ಯಾರ್ಥಿ ಸಮ್ಮೇಳನದಂತಹ ಸಮ್ಮೇಳನವೂ ಆಗಿರಲಿಲ್ಲ. ಆದರಿಂದ ಇದೂ ಸಂಪೂರ್ಣವಾಗಿ ಹೊಸ ಸಂಘಟ್ಟನೆಯೇ ಆಗಿತ್ತು ! ಈ ಸಮ್ಮೇಳನದ ಶಾಖೆಗಳು ಎಲ್ಲೆಲ್ಲೂ ತೆರೆದುವು.

ಬಿಹಾರಿನ ವಿದ್ಯಾರ್ಥಿಗಳಿದ್ದಲ್ಲೆಲ್ಲ ಒಂದೊಂದು ಅಂಗಸಂಸ್ಥೆ ಹುಟ್ಟಿಕೊಂಡಿತು. ೧೯೦೬ ರಲ್ಲಿ ಹುಟ್ಟಿದ ಈ ಸಮ್ಮೇಳನ ೧೯೨೦ ರ ವರೆಗೂ ಪ್ರತಿವರ್ಷವೂ ವಾರ್ಷಿಕ ಸಭೆಯನ್ನು ನಡೆಸಿತು. ಈ ಸಭೆಗಳಲ್ಲಿ ಸಚ್ಚಿದಾನಂದ ಸಿನ್ಹ, ಹಸನ್ ಇಮಾಮ್, ಮಹಾತ್ಮಗಾಂಧಿ, ಷರ್ಫು ದೀನ್, ಸರೋಜಿನಿನಾಯ್ಡು, ಸಿ. ಎಫ್. ಆಂಡ್ರೂಸ್ ಮುಂತಾದ ಹಿರಿಯರು ಭಾಷಣಗಳನ್ನು ಮಾಡುತ್ತಿದ್ದರು. ಈ ಹದಿನೈದುವರ್ಷ ಗಳಲ್ಲಿ ಬಿಹಾರಿನ ಎಲ್ಲ ಉತ್ಸಾಹೀಯುವಕರಿಗೂ ಈ ಸಮ್ಮೇಳನವೇ ಸಾಧನೆಯ ಹಾದಿ ತೋರಿಕೊಟ್ಟಿತು. ೧೯೨೦ ರ ನಂತರ ಕಾಂಗ್ರೆಸ್ ಚಳುವಳಿಗಳಲ್ಲಿ ಭಾಗವಹಿಸಿದ ಬಿಹಾರಿನ ನಾಯಕರಿಗೆಲ್ಲ ಈ ಸಮ್ಮೇಳನವೇ ಸಾಧನೆಯ ನೆಲ, ಗರಡಿಯಮನೆ! ಪ್ರಾಂತದಲ್ಲಿ ಎಲ್ಲ ಕಡೆಯೂ ಹೊಸ ಉತ್ಸಾಹ, ವಿಚಾರ ದೃಷ್ಟಿ, ಹೊಸಜೀವನವನ್ನು ತುಂಬಿಕೊಟ್ಟಿತು ಈ ಸಮ್ಮೇಳನ. ಅದರ ಫಲ ಕಂಡುದು ೧೯೨೦ರ ಅಸಹಕಾರ ಚಳುವಳಿಯಲ್ಲಿ!

ಈ ನಡುವೆಯೇ ೧೯೦೬ ರ ಡಿಸೆಂಬರಿನಲ್ಲಿ ಕಾಂಗ್ರೆಸ್ ಅಧಿವೇಶನ ಕಲ್ಕತ್ತೆಯಲ್ಲಿ ಸೇರಿತು. ದಾದಾಬಾಯಿ ನವರೋಜಿಯವರು ಅಧ್ಯಕ್ಷರಾಗಿದ್ದರು. ರಾಜೇಂದ್ರಪ್ರಸಾದರು ಈ ಅಧಿವೇಶನದಲ್ಲಿ ಒಬ್ಬ ಸ್ವಯಂಸೇವಕನಾಗಿ ಕೆಲಸಮಾಡಿದರೂ, ೧೯೧೧ ರ ತನಕ ಅಷ್ಟಾಗಿ ಆಸಕ್ತಿ ಬರಲಿಲ್ಲ. ೧೯೧೧ ರಲ್ಲಿ ಕಾಂಗ್ರೆಸ್ಸಿನ ಕಮಿಟಿಯ ಸದಸ್ಯರಾದರು. ಅಂದಿನಿಂದ ಕಾಂಗ್ರೆಸ್ಸಿಗೂ ರಾಜೇಂದ್ರರಿಗೂ ಒಡೆಯಲಾರದ ಗಂಟು ಬಿದ್ದಿತು. ಆ ಕಾಲದಲ್ಲಿ ಕಾಂಗ್ರೆಸ್ ಸಂಸ್ಥೆ ಬಲವಾಗಿರಲಿಲ್ಲ. ಸಂಘಟನೆಯೂ ಭದ್ರವಾಗಿರಲಿಲ್ಲ. ಬಿಹಾರ್ ಪ್ರಾಂತೀಯ ಸಮಿತಿಯೊಂದು ೧೯೦೮ ರಲ್ಲಿ ಸ್ಥಾಪಿತವಾದರೂ, ಬಿಹಾರ್ ಬಂಗಾಲದಿಂದ ೧೯೧೨ ರ ವರೆಗೂ ಬೇರೆಯಾಗಲಿಲ್ಲ. ಯಾರೋ ಕೆಲವರು ಸಭೆ ಸೇರಿ ತಮ್ಮನ್ನೇ ತಾವು ಚುನಾಯಿಸಿಕೊಳ್ಳುತ್ತಿದ್ದರು. ದಕ್ಷತೆಯಾಗಲಿ, ಶಿಸ್ತಾಗಲಿ ಇರಲಿಲ್ಲ. ಅಧಿವೇಶನಕ್ಕೆ ಯಾರು ಹೋದರೆ ಅವರೇ ಪ್ರತಿನಿಧಿಗಳಾಗುತ್ತಿದ್ದರು. ೧೯೧೧ರಲ್ಲಿ ರಾಜೇಂದ್ರಪ್ರಸಾದರು ಕಾಂಗ್ರೆಸ್ಸಿಗೆ ಯಾವ ಸೇವೆಯನ್ನು ಮಾಡದಿದ್ದರೂ ಚುನಾಯಿತ

ರಾದರು. ಬಿಹಾರಿನ ಜನರಿಗೆಲ್ಲಾ ರಾಜೇಂದ್ರರು ಚೆನ್ನಾಗಿ ಪರಿಚಯ ವಿದ್ದುದರಿಂದ ಅಖಿಲ ಭಾರತೀಯ ಕಾಂಗ್ರೆಸ್ ಸಮಿತಿಗೂ ಅವರನ್ನು ಚುನಾಯಿಸಿದರು. ಈ ಎಲ್ಲ ಕಾರಣಗಳಿಂದ ರಾಜೇಂದ್ರರ ಮನಸ್ಸಿನಲ್ಲಿ ದೇಶಕ್ಕೆ ಯಾವುದಾದರೂ ರೀತಿಯಲ್ಲಿ ಸೇವೆ ಮಾಡಬೇಕೆನ್ನುವ ಆಸೆ ಹುಟ್ಟಿತು. ಆದರೆ ಯಾವಬಗೆಯಲ್ಲಿ, ಯಾವದಾರಿಯಲ್ಲಿ ಯಾವ ಸೇವೆ ಮಾಡುವುದೆಂದು ಮಾತ್ರ ತಿಳಿಯದು. ವಿದೇಶಯಾತ್ರೆಮಾಡಿ ಐ. ಸಿ. ಎಸ್. ಪರೀಕ್ಷೆಮಾಡಿಬರುವ ಇಚ್ಛೆಯೂ ಬಂತು. ಒಂದು ಕಡೆ ಯಾವ ನೌಕರಿಯನ್ನೂ ಹಿಡಿಯದೆ ದೇಶಸೇವೆ ಮಾಡಬೇಕೆನ್ನುವ ಯೌವನಸಹಜ ಆದರ್ಶವಾದ. ಮತ್ತೊಂದು ಕಡೆ ವಿದೇಶಯಾತ್ರೆಯ ಹುಚ್ಚು ಭ್ರಮೆ. ಇದು ೧೯೦೭ ರ ಕಾಂಗ್ರೆಸ್ ಅಧಿವೇಶನಕ್ಕೆ ಮೊದಲುನಡೆದ ಘಟನೆ. ಮನೆಯವರಿಗೆ ತಿಳಿಯದಂತೆ ಗುಟ್ಟಿನಿಂದ ಹಣದ ಏರ್ಪಾಟನ್ನೂ ಪ್ರಯಾಣಸಿದ್ಧತೆಯನ್ನೂ ಮಾಡಿಕೊಂಡಿದ್ದರು. ಆದರೆ ಆಗ ತಂದೆಯವರಿಗೆ ವಿಪರೀತ ಖಾಯಿಲೆಯಾಯಿತು ಮನೆಯವರಿಗೆ ರಾಜೇಂದ್ರರ ವಿದೇಶಯಾತ್ರೆಯ ಸುದ್ದಿ ಕೇಳಿ ವಿಪರೀತ ಕಳವಳವಾಯಿತು. ಅಂತೂ ವಿದೇಶಪ್ರಯಾಣ ನಿಂತಿತು. ೧೯೦೮ ರ ಮಾರ್ಚಿಯಲ್ಲಿ ರಾಜೇಂದ್ರರ ತಂದೆ ಮಹದೇವ ಸಹಾಯರು ತೀರಿಕೊಂಡರು ಆದರೆ ಸಾಯುವ ಮೊದಲು ತಮ್ಮ ಮೊಮ್ಮಕ್ಕಳನ್ನು ನೋಡುವ ಸೌಭಾಗ್ಯ ಅವರಿಗೆ ಸಿಕ್ಕಿತು, ಮಹೇಂದ್ರನಿಗೆ ಎರಡು ಹೆಣ್ಣುಮಕ್ಕಳೂ, ಜನಾರ್ಧನನೆಂಬ ಗಂಡುಮಗುವೂ ಆಗಿದ್ದವು. ರಾಜೇಂದ್ರರಮಗ ಮೃತ್ಯುಂಜಯನೂ ಅದೇವರ್ಷ ಹುಟ್ಟಿದುದು. ತಂದೆ ಸಾಯುವಾಗ ಅವರ ಮುಖ ಸಿಕ್ಕಿದುದರಿಂದ ರಾಜೇಂದ್ರರಿಗೆ ಒಂದು ಬಗೆಯ ಸಮಾಧಾನ-ತಾವು ವಿಲಾಯಿತಿಗೆ ಹೋಗಿದ್ದರೆ ತಂದೆಯ ಮುಖ ಕೂಡ ಸಿಕ್ಕುತ್ತಿರಲಿಲ್ಲ ಹೋಗದೆಉಳಿದುಕೊಂಡುದೇ ಒಳ್ಳೆಯದೆನಿಸಿತು. ವಿದೇಶಯಾತ್ರೆಯ ಹುಚ್ಚು, ತಂದೆಯ ಸಾವು ಇವುಗಳಿಂದ ಪರೀಕ್ಷೆಯ ಕಡೆಗೆ ಅಷ್ಟಾಗಿಗಮನ ಕೊಡಲಿಲ್ಲ. ಇದರಿಂದ ಎಂ. ಎ. ಪರೀಕ್ಷೆಯಲ್ಲಿ ಮೊದಲನೆಯಸ್ಥಾನ ಸಿಗಲಿಲ್ಲ. ಆದರೆ ಅದು ತಮ್ಮ ಉದಾಸೀನದ ಫಲವೇ ಎಂದು ರಾಜೇದ್ರರಿಗೆ ತಿಳಿದಿತ್ತು. ಆದ್ದರಿಂದ ಪರೀಕ್ಷಾಫಲ ಅವರಿಗೆ ಸಮಾಧಾನವಾಗಿಯೇ ಇತ್ತು.

ಮುಂದೆ ಏನುಮಾಡಬೇಕೆಂದು ಯೋಚಿಸುತ್ತಿದ್ದಾಗ ಮುಜಫರ್‌ಪುರದ ಕಾಲೇಜಿನಲ್ಲಿ ಪ್ರಾಧ್ಯಾಪಕ ಕೆಲಸ ಸಿಕ್ಕಿತು. ೧೯೦೮ನೆಯ ಜುಲೈ ತಿಂಗಳಲ್ಲಿ ಕಾಲೇಜಿನ ಆರಂಭವಾದೊಡನೆಯೇ ರಾಜೇಂದ್ರರು ಪ್ರೊಫೆಸರ್ ಕೆಲಸಕ್ಕೆ ಸೇರಿದರು. ಆದರೆ ಕಾಲೇಜಿನ ಆರ್ಥಿಕಸ್ಥಿತಿ ಚೆನ್ನಾಗಿರಲಿಲ್ಲ. ಮಹೇಂದ್ರರಿಗೆ ರಾಜೇಂದ್ರ ಅಲ್ಲಿರುವುದು ಒಗ್ಗಲಿಲ್ಲ. ಕಲ್ಕತ್ತೆಗೆ ಹಿಂದಿರುಗಿ ಬಿ.ಎಲ್. ಪರೀಕ್ಷೆ ಮುಗಿಸಿ ವಕೀಲಿಯನ್ನಾರಂಭಿಸಲೆಂದು ಅವರ ಆಸೆಯಿತ್ತು. ರಾಜೇಂದ್ರರು ಕಾಲೇಜಿನಲ್ಲಿ ೮-೧೦ ತಿಂಗಳು ಮಾತ್ರ ಕೆಲಸ ಮಾಡಿ ೧೯೦೯ರ ಮಾರ್ಚಿಯಲ್ಲಿ ಕಲ್ಕತ್ತೆಗೆ ಬಂದು ವಕೀಲಿಗೆ ಆರಂಭಿಸಿದರು. ಎರಡು ವರ್ಷಕಾಲ ಯಾರಾದರೂ ಹಿರಿಯ ವಕೀಲರ ಬಳಿ ಕೆಲಸ ಕಲಿಯುವುದು ಅವಶ್ಯವಾಗಿತ್ತು. ಈ ಎರಡು ವರ್ಷಕಾಲ ಚೆನ್ನಾಗಿ ನ್ಯಾಯಶಾಸ್ತ್ರವನ್ನು ಅಭ್ಯಾಸಮಾಡುವ ತೀರ್ಮಾನಮಾಡಿದರು. ಆದರೆ ಆ ಎರಡು ವರ್ಷಕಾಲ ಅಣ್ಣನ ಮೇಲೆ ತಾವು ಹೊರೆಯಾಗಿರಲು ಇಷ್ಟವಿಲ್ಲದೆ ಸಿಟಿ ಕಾಲೇಜಿನಲ್ಲಿ ಕೆಲಕಾಲ ಪ್ರೊಫೆಸರ್ ಕೆಲಸ ಮಾಡಿದರು. ಅನಂತರ ತಮ್ಮ ಮನೆಯಲ್ಲಿಯೇ ಕೆಲವು ಹುಡುಗರಿಗೆ ಪಾಠ ಹೇಳಿಕೊಡುತ್ತಿದ್ದರು. ಖಾನ್‌ಬಹದೂರ್ ಶಂಸುಲಹುದಾ ಸಾಹೇಬರ ಹತ್ತಿರ ವಕೀಲಿಯ ಕೆಲಸ ಕಲಿಯಲು ಸೇರಿದರು. ಆ ಕಾಲವನ್ನು ಚೆನ್ನಾಗಿಯೇ ಕೆಲಸ ಕಲಿಯುವುದರಲ್ಲೇ ಉಪಯೋಗಿಸಿಕೊಂಡರು. ಅವರ ಮನೆಗೂ ರಾಜೇಂದ್ರರಿದ್ದ ಹೋಟಲಿಗೂ ಬಹಳ ದೂರವಿತ್ತು ಟ್ರಾಮಿನಲ್ಲಿ ಹೋಗಿ ಆಮೇಲೆಯೂ ಒಂದು ಮೈಲಿಯಷ್ಟು ನಡೆಯಬೇಕಾಗಿತ್ತು. ಸಾಹೇಬರು ಬೆಳಿಗ್ಗೆ ಬೇಗನೆ ಎದ್ದು ಪತ್ರಿಕೆಗಳನ್ನು ನೋಡುತ್ತಿದ್ದರು. ರಾಜೇಂದ್ರರು ಅಲ್ಲಿಗೆ ಬೆಳಿಗ್ಗೆ ಏಳು ಗಂಟೆಯ ವೇಳೆಗೆ ಹೋಗಿ ಹತ್ತು ಗಂಟೆಯತನಕ ಕೆಲಸಮಾಡಿ ಅನಂತರ ಹೋಟಲಿಗೆ ಹಿಂದಿರುಗಿ ಊಟಮಾಡಿ ಒಂದುಗಂಟೆಯ ವೇಳೆಗೆ ಹೈ-ಕೋರ್ಟಿಗೆ ಹೋಗುತ್ತಿದ್ದರು. ಹೈ-ಕೋರ್ಟಿನಿಂದ ಬಂದು ಭವಾನಿಪುರಕ್ಕೆ ೪ ಮೈಲಿ ನಡೆದುಹೋಗಿ ಹುಡುಗನಿಗೆ ಪಾಠ ಹೇಳಿ ರಾತ್ರಿ ೧೦ ಗಂಟೆಗೆ ಹೋಟಲಿಗೆ ಹಿಂತಿರುಗಿ ನಿದ್ರೆಹೋಗು

ತಿದ್ದರು. ಇದರಿಂದ ವಿಪರೀತ ಆಯಾಸವಾಗುತಿತ್ತು. ಕೆಲಸ ಮಾತ್ರ ಚೆನ್ನಾಗಿ ಕಲಿತರು. ಕೆಲವು ದಿನಗಳ ನಂತರ, ಶಂಸುಲಹುದಾ ಸಾಹೇಬರು ತಮ್ಮ ಮನೆಯಲ್ಲಿಯೇ ಎರಡು ಕೋಣೆಯನ್ನು ಬಿಟ್ಟುಕೊಟ್ಟರು. ಒಂದರಲ್ಲಿದ್ದುಕೊಂಡು ಇನ್ನೊಂದರಲ್ಲಿ ಅಡಿಗೆಮಾಡಿಕೊಳ್ಳುತ್ತಿದ್ದರು ರಾಜೇದ್ರಪ್ರಸಾದ್. ಇದರಿಂದ ಕೆಲಸಕ್ಕೆ ಬಹಳ ಅನುಕೂಲವಾಯಿತು. ಶಂಸುಲಹದಾ ಸಾಹೇಬರು ಮುಸಲ್ಮಾನರಲ್ಲಿ ಬಹಳ ತಲೆಮೆಗೊಂಡ ವ್ಯಕ್ತಿ,ನಾಯಕರು. ಮುಂದೆ ಹೈಕೋರ್ಟ್ ಜಡ್ಜಿಗಳಾದರು. ರಾಜೇಂದ್ರರನ್ನು ತಮ್ಮ ಸ್ವಂತ ಮಗನಂತೆಯೇ ನೋಡಿಕೊಳ್ಳುತ್ತಿದ್ದರು. ಅವರೆಂತಹ ಸಜ್ಜನರೆಂದರೆ ತಮ್ಮ ಮನೆಯಲ್ಲಿದ್ದ ಹಿಂದೂ ನೌಕರರ ಮನಸ್ಸಿಗೆ ನೋವಾದೀತೆಂದು ಗೋವಧೆಯನ್ನು ತಮ್ಮ ಮನೆಯಲ್ಲಿ ಬಿಟ್ಟು ಬಿಟ್ಟಿದ್ದರು. ಅವರಬಳಿ ಎರಡು ವರ್ಷ ಕಲಿತು, ರಾಜೇಂದ್ರರು ೧೯೧೧ ರ ಆಗಸ್ಟಿನಲ್ಲಿ ತಾವೇ ವಕೀಲಿಯನ್ನು ಆರಂಭಿಸಿದರು. ಈ ವೇಳೆಗೆ ಬಿ. ಎಲ್. ಪಾಸಾಗಿದ್ದರು. ಕೆಲವು ದಿನಗಳಲ್ಲಿ ಹೈಕೋರ್ಟಿಗೆ ರಜ ಬಂದಾಗ ರಾಜೇಂದ್ರಪ್ರಸಾದ್ ಬಿಹಾರಕ್ಕೆ ಹೋದರು. ಆಗ ಮದನಮೋಹನ ಮಾಲವೀಯಜಿಯವರು ತಮ್ಮ ಹಿಂದೂ ವಿಶ್ವವಿದ್ಯಾನಿಲಯಕ್ಕಾಗಿ ಹಣ ಕೂಡಿಸಲು ಬಿಹಾರಿನಲ್ಲಿ ಸುತ್ತುತ್ತಿದ್ದರು. ರಾಜೇಂದ್ರಪ್ರಸಾದರು ಅವರಿಗೆ ಸಹಾಯಮಾಡಿ ಒಂದಿಷ್ಟು ಹಣ ಕೂಡಿಸಿಕೊಟ್ಟರು. ರಜೆಕಳೆದು ಹೈಕೋರ್ಟು ಆರಂಭವಾದಾಗ ಶಂಸುಲಹುದಾ ಸಾಹೇಬರು ಗವರ್ನರರ ಕಾರ್ಯಕಾರೀ ಸಮಿತಿಯ ಸದಸ್ಯರಾಗಿ ನೇಮಕವಾದರು ಆಗ ತಮ್ಮ ಮೊಕದ್ದಮೆಗಳಲ್ಲಿ ಕೆಲವನ್ನು ರಾಜೇಂದ್ರರಿಗೆ ವಹಿಸಿಕೊಟ್ಟರು. ಈ ಮೊಕದ್ದಮೆಗಳಿಂದ ಹೆಚ್ಚು ಗಳಿಕೆಯಾಗದಿದ್ದರೂ, ಅನುಭವ ಬರಲು ಸಹಕಾರಿಯಾಗುತ್ತಿತ್ತು. ಮೊದಲನೆಯ ಮೊಕದ್ದಮೆಯಲ್ಲಿ ರಾಜೇಂದ್ರರು ಬಹಳ ಗಾಢವಾಗಿ ಅಭ್ಯಾಸಮಾಡಿ ವಾದಹೂಡಿದರು. ಇದರಿಂದ ಆಗ ಜಡ್ಜಿಗಳಾಗಿದ್ದ ಸರ್ ಅಸುತೋಷ್ ಮುಖರ್ಜಿ ರಾಜೇಂದ್ರರನ್ಯಾಯಜ್ಞಾನ ಕಂಡು ಮೆಚ್ಚಿಕೊಂಡರು. ಅವರೂ ಕಲ್ಕತ್ತ ವಿಶ್ವವಿದ್ಯಾನಿಲಯದ ಉಪಸ್ಥಾನಪತಿ (Vice-chancellor)

ಯಾಗಿದ್ದರು. ಮುಖರ್ಜಿಯವರೇ ಕರೆಸಿಕೊಂಡು ರಾಜೇಂದ್ರರಿಗೆ ಲಾಕಾಲೇಜಿನಲ್ಲಿ ಪ್ರೊಫೆಸರ್ ಕೆಲಸ ಕೊಡಿಸಿದರು. ಇದು ಗಳಿಕೆಯಿಲ್ಲದ ಆ ಮೊಕದ್ದಮೆ ಕೊಟ್ಟ ಗೌರವ !

ಆರಂಭದಲ್ಲಿ ಬಡವ ಕಕ್ಷಿಗಾರರೇ ಬಂದರು. ಅವರ ಕೆಲಸವನ್ನು ಮಾಡಲು ಮತ್ತೊಬ್ಬರ ನೆರವಿಲ್ಲದೆ ತಾವೇ ಕಷ್ಟಪಟ್ಟು ಅಭ್ಯಾಸ ಮಾಡಬೇಕಾಗಿತ್ತು. ಇದರಿಂದ ಬುದ್ಧಿ ಅನುಭವ ಎರಡೂ ವಿಕಾಸವಾಗಲು ಅನುಕೂಲವಾಯಿತು. ಅಲ್ಲದೆ ಗೌರವವೂ ಹೆಚ್ಚಿತು. ಕೋರ್ಟಿನಲ್ಲಿ ಎಲ್ಲರಿಗೂ ಇವರ ನ್ಯಾಯಜ್ಞಾನದ ಬಗೆಯೂ ಸತ್ಯ ಪ್ರಿಯತೆಯ ವಿಷಯವಾಗಿಯೂ ಗೌರವ ಹುಟ್ಟಿತು !

ಇದೇ ಕಾಲದಲ್ಲೇ ಮಾನನೀಯ ಗೋಖಲೆಯವರನ್ನು ರಾಜೇಂದ್ರಪ್ರಸಾದರು ಭೇಟಿಮಾಡಿದರು. ೧೯೧೦ ರಲ್ಲಿ ಕಲ್ಕತ್ತೆಯಲ್ಲಿ ರಾಜೇಂದ್ರರು ಹೋಟಲಿನಲ್ಲಿದ್ದಾಗ ಗೋಖಲೆಯವರು ಹೇಳಿಕಳಿಸಿದರು. ರಾಜೇಂದ್ರರಿಗೆ ಈತನಕ ಗೋಖಲೆಯವರನ್ನು ಕಾಣುವ ಸೌಭಾಗ್ಯ ಸಿಕ್ಕಿರಲಿಲ್ಲ. ಈಗ ಗೋಖಲೆಯವರು ತಾವಾಗಿಯೇ ಹೇಳಿ ಕಳಿಸಿದ್ದರು. ವಿದ್ಯಾರ್ಥಿಸಮ್ಮೇಲನದಲ್ಲಿ ಇವರೊಂದಿಗೆ ಕೆಲಸ ಮಾಡಿದ ಶ್ರೀ ಕೃಷ್ಣಪ್ರಸಾದರನ್ನು ಗೋಖಲೆಯವರು ಕರೆಸಿದ್ದರು. ಗೋಖಲೆಯವರು ಕೆಲವು ದಿನಗಳ ಹಿಂದೆ ಭಾರತ ಸೇವಕ ಸಂಘ (Servants of India Society) ಯನ್ನು ಸ್ಥಾಪಿಸಿದ್ದರು. ಬಿಹಾರಿನ ಹಲವರು ಉತ್ಸಾಹೀತರುಣರು ತಮ್ಮ ಸಂಸ್ಥೆಗೆ ಸೇರಲೆಂದು ಅವರ ಆಸೆ. ಶ್ರೀ ಕೃಷ್ಣ ಮತ್ತು ರಾಜೇಂದ್ರ ಇಬ್ಬರೂ ಬಹಳ ಒಳ್ಳೆಯ ವಿದ್ಯಾರ್ಥಿಗಳಾಗಿದ್ದರೆಂದು ಅವರಿಗೆ ಗೊತ್ತು. ಅವರಿಬ್ಬರನ್ನು ಅರಿಸಿ ಕೊಂಡು ಎರಡು ಎರಡೂವರೆ ಗಂಟೆಗಳ ಕಾಲ ಮಾತನಾಡಿದರು. ತಾವೂ ಬಡವರ ಮನೆಯವರು. ಪರೀಕ್ಷೆಗಳನ್ನು ಮುಗಿಸಿ ತುಂಬಾ ಹಣ ಸಂಪಾದಿಸುವೆವೆಂದು ಮನೆಯವರು ಆಸೆಯಿಟ್ಟುಕೊಂಡಿದ್ದರು. ಆದರೆ ತಾವು ಅದನ್ನೆಲ್ಲ ಒತ್ತರಿಸಿ ದೇಶಸೇವೆಗೆ ಟೊಂಕಕಟ್ಟಿನಿಂತುದರಿಂದ ಎಲ್ಲರಿಗೂ ದುಃಖವಾಯಿತು. ಕೆಲವು ದಿನ ಮಾತೂ ಕೂಡ ಬಿಟ್ಟರು. ಆದರೆ ಇದು ನಿಶ್ಚಯ. ಯಾರು ಮೊದಲು ಬಯ್ಯುವರೋ

ಕೊನೆಗೆ ಅವರೇ ಪೂಜಿಸುವರು. ಆದ್ದರಿಂದ ರಾಜೇಂದ್ರ ಮತ್ತು ಶ್ರೀ ಕೃಷ್ಣ ಇಬ್ಬರೂ ಈ ಬಗ್ಗೆ ಯೋಚಿಸಬೇಕು. ಈ ತಕ್ಷಣವೇ ನಿರ್ಣಯ ಕೊಡಬೇಕಾಗಿಲ್ಲ. ಬೇಕಾದಷ್ಟು ಚಿಂತಿಸಿ ಅನಂತರ ತೀರ್ಮಾನಕ್ಕೆ ಬರಲಿ ಎಂದೂ ಗೋಖಲೆಯವರು ಹೇಳಿದರು. ಅವರ ಮಾತು ಕೇಳಿದಾಗ ರಾಜೇಂದ್ರರ ಮನಸ್ಸಿನಲ್ಲಿ ಎಲ್ಲವೂ ನಿರ್ಣಯವೇ ಆಗಿ ಹೋದಂತೆನಿಸಿತು. ಈ ಭೇಟಿಯಾದ ಹಲವು ದಿನ ರಾಜೇಂದ್ರರು ಆ ವಿಚಾರವಾಗಿಯೇ ಚಿಂತಿಸುತ್ತಿದ್ದರು. ಮನೆಯಲ್ಲಿ ತಾಯಿಯಿನ್ನೂ ಜೀವಂತವಾಗಿದ್ದರು. ಅಲ್ಲದೆ ತಾವು ಈಗಾಗಲೇ ಎರಡು ಮಕ್ಕಳ ತಂದೆಯೂ ಆಗಿದ್ದರು. ಮನೆಯಲ್ಲಿ ಎಲ್ಲರ ಅಭಿಪ್ರಾಯವೇನೋ ಅವರಿಗೆಷ್ಟು ದುಃಖವಾದೀತೋ ಎಂದು ಯೋಚನೆಯಾಯಿತು. ಆದರೆ ಗೋಖಲೆಯವರಂತಹ ಹಿರಿಯರು ತ್ಯಾಗದ ಮಾತಾಡಿರಲಿಲ್ಲವೇ ? ಆದರೆ ಮನೆಯ ಹೊರೆಯನ್ನೆಲ್ಲಾ ಅಣ್ಣನ ಹೆಗಲಿಗೇ ಹೊರಿಸಬೇಕೇ? ಈ ಮನಸ್ಸಿನ ಅಂತಃಕಲಹ ಹತ್ತು ಹನ್ನೆರಡು ದಿನ ನಡೆಯಿತು. ಕೊನೆಗೆ ಮಾನನೀಯ ಗೋಖಲೆಯವರ ಮಾತನ್ನೇ ಒಪ್ಪಿ ಅವರ ಸಂಸ್ಥೆಯಲ್ಲಿ ಸೇರಬೇಕೆಂದು ನಿಶ್ಚಯ ಮಾಡಿಕೊಂಡರು. ಆದರೆ ಈ ನಿಶ್ಚಯವನ್ನು ಅಣ್ಣನಿಗೆ ಹೇಳಲು ಧೈರ್ಯಸಾಲದು. ಅವರಿಗೆ ಈ ಮಾತಿನಿಂದ ಬಹಳ ದುಃಖವಾಗುವುದೆಂದು ರಾಜೇಂದ್ರರಿಗೆ ಗೊತ್ತಿತ್ತು. ಆದ್ದರಿಂದ ಒಂದು ದೊಡ್ಡ ಪತ್ರ ಬರೆದು, ಎಲ್ಲವನ್ನೂ ವಿವರವಾಗಿ ತಿಳಿಸಿ, ಅಣ್ಣ ಸುತ್ತಾಡಲು ಹೋಗಿದ್ದಾಗ ಅವರ ಹಾಸಿಗೆಯ ಮೇಲಿಟ್ಟುಬಿಟ್ಟರು. ಅವರು ಅದನ್ನು ಓದುವತನಕ ಹತ್ತಿರದ ಬೀದಿಯಲ್ಲೇ ಓಡಾಡಿಕೊಂಡಿದ್ದು ಅನಂತರ ಕೋಣೆಯೊಳಕ್ಕೆ ಬಂದರು. ರಾಜೇಂದ್ರರನ್ನು ತಡೆಯಲು ಅಣ್ಣನಿಗೆ ಇಷ್ಟವಿರಲಿಲ್ಲ. ಆದರೂ ಮನೆಯ ಎಲ್ಲ ಹೊಣೆಯನ್ನು ತಾವು ಹೋರುವುದು ಹೇಗೆಂದೇ ಅವರ ಯೋಚನೆ. ಅಣ್ಣ ತಮ್ಮ ಇಬ್ಬರೂ ಮನಸಾರ ಅತ್ತರು. ಅನಂತರ ಊರಿಗೆ ಹೋದರು. ಅಲ್ಲಿ ಎಲ್ಲರ ಅಭಿಪ್ರಾಯವೂ ಗೊತ್ತೇ ಇತ್ತು ತಾಯಿ ಮಾತೇ ಆಡಲಿಲ್ಲ. ಆದರೆ ಅಕ್ಕ ಮಾತ್ರ " ವಿದೇಶ ಯಾತ್ರೆಯ ನೆವದಿಂದ ತಂದೆಯನ್ನು ಅಳಿಸಿದೆ. ಈಗ ಸಾಧುಸನ್ಯಾಸಿಯಾಗಿ ತಾಯಿ

ಯನ್ನು ಅಳಿಸು '' ಎಂದಷ್ಟು ಅಂದು ಅಳಲಾರಂಭಿಸಿದರು. ಮನೆಯ ಅಳುವಿನ ಕೋಲಾಹಲದಲ್ಲಿ ರಾಜೇಂದ್ರರ ನಿಶ್ಚಯ ಕರಗಿಹೋಯಿತು. ರಾಜೇಂದ್ರರ ಜತೆಗಾರ ಶ್ರೀ ಕೃಷ್ಣರಧೂ. ಈ ರೀತಿಯೇ ಆಯಿತು. ಇಬ್ಬರೂ ಸೊಸೈಟಿಗೆ ಸೇರಲಿಲ್ಲ ಮನಸ್ಸು ನಿಶ್ಚಯಮಾಡಿಕೊಂಡರು ಹೃದಯ ಸಮಾಧಾನಗೊಳ್ಳಲಿಲ್ಲ, ದುಗುಡದಲ್ಲಿ ಅವರ ಹೃದಯ ಕರಗಿತು. ಈ ಘಟನೆ ಅವರ ಹೃದಯದ ಮೇಲೆ ತೀವ್ರವಾದ ಪ್ರಭಾವ ಬೀರಿತು. ಮನಸ್ಸು ಯಾವುದರಲ್ಲು ನಿಲ್ಲುತ್ತಿರಲಿಲ್ಲ. ಇದರಿಂದಲೇ ಬಿ.ಎಲ್. ಪರೀಕ್ಷೆಗೆ ವ್ಯಾಸಂಗಮಾಡುವುದರಲ್ಲಿ ಕಷ್ಟತೋರಿದುದು. ಕೊನೆಗೆ ವಿದ್ಯಾಭ್ಯಾಸ ಮುಗಿಸಿ ವಕೀಲರಂತೂ ಆದರು.

ವಕೀಲರಾದರೂ ಸತ್ಯಪ್ರಿಯತೆಯನ್ನು ಬಿಡಲಿಲ್ಲ. ಇವರ ಬಳಿಗೆ ಬರುತ್ತಿದ್ದ ಹೆಚ್ಚು ಕಕ್ಷಿಗಾರರು ಬಡವರೇ! ಆದರೆ ಅವರ ಪರವಾಗಿ ವಾದ ಮಾಡಲು ರಾಜೇಂದ್ರರು ಬಹಳ ಕಷ್ಟಪಡಬೇಕಾಗಿತ್ತು. ಪಡುತ್ತಿದ್ದರು. ಇದರಿಂದ ರಾಜೇಂದ್ರರು ಹಣದ ಆಸೆಗಾಗಿ ಸುಳ್ಳು ಮೊಕದ್ದಮೆಗಳಲ್ಲಿ ಭಾಗವಹಿಸುವುದಿಲ್ಲವೆಂದು ವಕೀಲರಿಗೂ, ಜಡ್ಜಿಗಳಿಗೂ ತಿಳಿದು ರಾಜೇಂದ್ರರ ಗೌರವ ಹೆಚ್ಚಿತು. ಅವರು ಮೊಕದ್ದಮೆಯನ್ನು ಒಪ್ಪಿಕೊಂಡರೆಂದೊಡನೆಯೇ ನ್ಯಾಯ ಆವರ ಕಡೆಗೇ ಇದೆಯೆಂದು ಎಲ್ಲರೂ ಹೇಳಿಬಿಡುತ್ತಿದ್ದರು. ಎಷ್ಟೋ ಬಾರಿ ನ್ಯಾಯವಲ್ಲವೆಂದು ತಮಗೆ ತೋರಿದ ಮೊಕದ್ದಮೆಯನ್ನು ಅವರು ತಿರಸ್ಕರಿಸಿದ್ದರು. ಅದೇ ಮೊಕದ್ದಮೆಯನ್ನು ಬೇರೆ ವಕೀಲರು ತೆಗೆದುಕೊಂಡು ವಾದಮಾಡಿ ಸೋಲುತ್ತಿದ್ದರು !

೧೯೧೫ ನೆಯ ಇಸವಿಯಲ್ಲಿ ರಾಜೇಂದ್ರರು ಎಂ.ಎಲ್. ಪರೀಕ್ಷೆಗೆ ಕುಳಿತು ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣರಾದರು. ಇವರ ಗೆಳೆಯ ವೈದ್ಯನಾಥರು ಎರಡನೆಯ ದರ್ಜೆಯಲ್ಲಿ ಉತ್ತೀರ್ಣರಾದರು ಆ ವರುಷ ಎಂ.ಎಲ್ ಪರೀಕ್ಷೆಯಲ್ಲಿ ತೇರ್ಗಡೆಯಾದವರು ಅವರಿಬ್ಬರೇ! ಬಿಹಾರಿನಲ್ಲಿ ಮೊತ್ತಮೊದಲು ತೇರ್ಗಡೆಯಾದವರು ರಾಜೇಂದ್ರಪ್ರಸಾದರೇ ! ವಕೀಲಿಯ ಕೆಲಸದಲ್ಲಿ ಹಲವಾರು ಹಿರಿಯರ ಜತೆಯಲ್ಲಿ ಕೆಲಸ ಮಾಡಿ ಒಳ್ಳೆಯ ಹೆಸರು ಪಡೆದರು. ಸ್ವಭಾವತಃ ಯಾರನ್ನೂ ತಾವಾ

ಗಿಯೋ ಪರಿಚಯ ಮಾಡಿಕೊಳ್ಳದಿದ್ದರೂ ಗಾಢವಾದ ಗೆಳೆತನ ಬೆಳೆಸು ತ್ತಿದ್ದರು. ಕೆಲವರು ನಿಕಟ ಗೆಳೆಯರನ್ನು ಸಂಪಾದಿಸಿದರು. ಮುಂದೆ ಅಸಹಕಾರಚಳುವಳಿಯಲ್ಲಿ ಊರೂರು ಸುತ್ತಿದಾಗ ಈ ಗೆಳೆಯರೆಲ್ಲ ಸಿಕ್ಕಿ ನೆರವಾಗುತ್ತಿದ್ದರು. ಈ ವರ್ಷವೇ ಪಾಟ್ನಾದಲ್ಲಿ ಹೈಕೋರ್ಟು ಆದುದು. ರಾಜೇಂದ್ರರು ಕಲ್ಕತ್ತೆಯಿಂದ ಪಾಟ್ನಾಕ್ಕೆ ಬಂದು ಅಲ್ಲಿಯ ಹೈಕೋರ್ಟಿನಲ್ಲಿಯೇ ಕೆಲಸ ಮಾಡುತ್ತಿದ್ದರು. ಪ್ರಸಿದ್ಧ ವಕೀಲ ಡಾಕ್ಟರ್ ರಾಸ್‌ಬಿಹಾರಿಘೋಷರ ವಿರುದ್ಧ ಒಂದು ಮೊಕದ್ದಮೆಯಲ್ಲಿ ಗೆದ್ದರು. ಜಡ್ಜಿಗಳಿಗಂತೂ ರಾಜೇಂದ್ರರೆಂದರೆ ಸಂಪೂರ್ಣ ನಂಬಿಗೆ. ಈ ವರ್ಷವೇ ಸಚ್ಚಿದಾನಂದ ಸಿಂಹ ಮುಂತಾದ ಹಿರಿಯ ವಕೀಲರೊಂದಿಗೆ ಕೆಲಸ ಮಾಡುವ ಅವಕಾಶ ದೊರೆಯಿತು ವಕಿಲೀಯ ಕೆಲಸವೂ ಹೆಚ್ಚಿತು.

ಈ ಸಂದರ್ಭದಲ್ಲೇ ರಾಜೇಂದ್ರಪ್ರಸಾದರು ಮೊತ್ತಮೊದಲಿಗೆ ಸರ್ಕಾರದ ವಿರುದ್ಧ ಚಳುವಳಿಯನ್ನೆಬ್ಬಿಸಿ, ಗೆದ್ದದು. ಪಾಟ್ನಾ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಭಾರತ ಸರ್ಕಾರ ಒಂದು ಮಸೂದೆ ತಂದಿತು. ಈ ಮಸೂದೆ ರಾಜೇಂದ್ರರಿಗೂ ಮತ್ತು ಬಿಹಾರಿನ ಉಳಿದ ನಾಯಕರಿಗೂ ಒಪ್ಪಿಗೆಯಾಗಲಿಲ್ಲ. ಈ ಮಸೂದೆಯ ಪ್ರಕಾರ ವಿಶ್ವವಿದ್ಯಾನಿಲಯದ ಸೆನೆಟ್ ಮತ್ತು ಕೌನ್ಸಿಲ್ಲುಗಳಲ್ಲಿ ಸರ್ಕಾರೀ ಅಧಿಕಾರಿಗಳೇ ಬಹುಮತದಲ್ಲಿರುತ್ತಿದ್ದರು. ಅಂದ ಮೇಲೆ ವಿಶ್ವವಿದ್ಯಾನಿಲಯ ಸಂಪೂರ್ಣವಾಗಿ ಸರ್ಕಾರದ ಅಧೀನವಾಗಿರಬೇಕಾಗುತ್ತಿತ್ತು. ಇದರಿಂದ ಹೊಸಯೋಜನೆ ಯಾವುದನ್ನೂ ವಿಶ್ವವಿದ್ಯಾನಿಲಯದಲ್ಲಿ ತರಲು ಸಾಧ್ಯವಾಗುತ್ತಿರಲಿಲ್ಲ. ಹೊಸರಕ್ತ ಬರಲು ಅವಕಾಶವಿರುತ್ತಿರಲಿಲ್ಲ. ರಾಜೇಂದ್ರಪ್ರಸಾದ್ ಮತ್ತಿತರರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಕಾರ್ಯರೀತಿಯನ್ನು ಕಂಡು ಮೆಚ್ಚಿಕೊಂಡಿದ್ದರು. ಸರ್ ಅಸುತೋಷ್ ಮುಖರ್ಜಿಯವರು ವಿಶ್ವವಿದ್ಯಾನಿಲಯದಲ್ಲಿ ಬೇಕಾದಷ್ಟು ಸುಧಾರಣೆಗಳನ್ನು ಮಾಡಿದ್ದರು. ಈ ಸುಧಾರಣೆಗಳನ್ನು ಸೆನೇಟಿನ ಸಹಾಯವಿಲ್ಲದಿದ್ದರೆ ಜಾರಿಗೆ ತರಲು ಆಗುತ್ತಿರಲಿಲ್ಲ. ಸೆನೇಟು ಸಾರ್ವಜನಿಕ ಸೇವಕರದಾಗಿರಬೇಕೇ ವಿನಹ

ಗಿಯೇ ಪರಿಚಯ ಮಾಡಿಕೊಳ್ಳದಿದ್ದರೂ ಗಾಢವಾದ ಗೆಳೆತನ ಬೆಳೆಸು ತ್ತಿದ್ದರು. ಕೆಲವರು ನಿಕಟ ಗೆಳೆಯರನ್ನು ಸಂಪಾದಿಸಿದರು. ಮುಂದೆ ಅಸಹಕಾರಚಳುವಳಿಯಲ್ಲಿ ಊರೂರು ಸುತ್ತಿದಾಗ ಈ ಗೆಳೆಯರೆಲ್ಲ ಸಿಕ್ಕಿ ನೆರವಾಗುತ್ತಿದ್ದರು. ಈ ವರ್ಷವೇ ಪಾಟ್ನಾದಲ್ಲಿ ಹೈಕೋರ್ಟು ಆದುದು. ರಾಜೇಂದ್ರರು ಕಲ್ಕತ್ತೆಯಿಂದ ಪಾಟ್ನಾಕ್ಕೆ ಬಂದು ಅಲ್ಲಿಯು ಹೈಕೋರ್ಟಿನಲ್ಲಿಯೇ ಕೆಲಸ ಮಾಡುತ್ತಿದ್ದರು. ಪ್ರಸಿದ್ಧ ವಕೀಲು ಡಾಕ್ಟರ್ ರಾಸ್‌ಬಿಹಾರಿಘೋಷರ ವಿರುದ್ಧ ಒಂದು ಮೊಕದ್ದಮೆಯಲ್ಲಿ ಗೆದ್ದರು. ಜಡ್ಜಿಗಳಿಗಂತೂ ರಾಜೇಂದ್ರರೆಂದರೆ ಸಂಪೂರ್ಣ ನಂಬಿಗೆ. ಈ ವರ್ಷವೇ ಸಚ್ಚಿದಾನಂದ ಸಿಂಹ ಮುಂತಾದ ಹಿರಿಯ ವಕೀಲರೊಂ ದಿಗೆ ಕೆಲಸ ಮಾಡುವ ಅವಕಾಶ ದೊರೆಯಿತು ವಕಿಲೀಯ ಕೆಲಸವೂ ಹೆಚ್ಚಿತು.

ಈ ಸಂದರ್ಭದಲ್ಲೇ ರಾಜೇಂದ್ರಪ್ರಸಾದರು ಮೊತ್ತಮೊದಲಿಗೆ ಸರ್ಕಾರದ ವಿರುದ್ಧ ಚಳುವಳಿಯನ್ನೆಬ್ಬಿಸಿ, ಗೆದ್ದದು. ಪಾಟ್ನಾ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ಭಾರತ ಸರ್ಕಾರ ಒಂದು ಮಸೂದೆ ತಂದಿತು. ಈ ಮಸೂದೆ ರಾಜೇಂದ್ರರಿಗೂ ಮತ್ತು ಬಿಹಾರಿನ ಉಳಿದ ನಾಯಕರಿಗೂ ಒಪ್ಪಿಗೆಯಾಗಲಿಲ್ಲ. ಈ ಮಸೂ ದೆಯ ಪ್ರಕಾರ ವಿಶ್ವವಿದ್ಯಾನಿಲಯದ ಸೆನೆಟ್ ಮತ್ತು ಕೌನ್ಸಿಲ್ಲು ಗಳಲ್ಲಿ ಸರ್ಕಾರೀ ಅಧಿಕಾರಿಗಳೇ ಬಹುಮತದಲ್ಲಿರುತ್ತಿದ್ದರು. ಅಂದ ಮೇಲೆ ವಿಶ್ವವಿದ್ಯಾನಿಲಯ ಸಂಪೂರ್ಣವಾಗಿ ಸರ್ಕಾರದ ಅಧೀನವಾಗಿ ರಬೇಕಾಗುತ್ತಿತ್ತು. ಇದರಿಂದ ಹೊಸಯೋಜನೆ ಯಾವುದನ್ನೂ ವಿಶ್ವ ವಿದ್ಯಾನಿಲಯದಲ್ಲಿ ತರಲು ಸಾಧ್ಯವಾಗುತ್ತಿರಲಿಲ್ಲ. ಹೊಸರಕ್ತ ಬರಲು ಅವಕಾಶವಿರುತ್ತಿರಲಿಲ್ಲ. ರಾಜೇಂದ್ರಪ್ರಸಾದ್ ಮತ್ತಿತರರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಕಾರ್ಯರೀತಿಯನ್ನು ಕಂಡು ಮೆಚ್ಚಿ ಕೊಂಡಿದ್ದರು. ಸರ್ ಅಸುತೋಷ್ ಮುಖರ್ಜಿಯವರು ವಿಶ್ವವಿದ್ಯಾ ನಿಲಯದಲ್ಲಿ ಬೇಕಾದಷ್ಟು ಸುಧಾರಣೆಗಳನ್ನು ಮಾಡಿದ್ದರು. ಈ ಸುಧಾರಣೆಗಳನ್ನು ಸೆನೇಟಿನ ಸಹಾಯವಿಲ್ಲದಿದ್ದರೆ ಜಾರಿಗೆ ತರಲು ಆಗುತ್ತಿರಲಿಲ್ಲ. ಸೆನೇಟು ಸಾರ್ವಜನಿಕ ಸೇವಕರದಾಗಿರಬೇಕೇ ವಿನಹ

ಸರ್ಕಾರದ ಅಧಿಕಾರಿಗಳದಲ್ಲ. ಕಲ್ಕತ್ತಾ ವಿಶ್ವವಿದ್ಯಾನಿಲಯದ ಸೆನೇಟು ಸಾರ್ವಜನಿಕ ನಾಯಕರಿಂದ ತುಂಬಿತ್ತು. ಆದ್ದರಿಂದಲೇ ಅಲ್ಲಿ ಸುಧಾರಣೆ ಸಾಧ್ಯವಿತ್ತು. ಆದರೆ ಈಗ ದೆಹಲಿ ಸರ್ಕಾರ ಪಾಟ್ನಾ ವಿಶ್ವವಿದ್ಯಾನಿಲಯಕ್ಕೆ ತಯಾರಿಸಿದ ಯೋಜನೆ ಇದಕ್ಕೆ ತೀರಾ ವಿರುದ್ಧವಾಗಿತ್ತು. ಈ ಮಸೂದೆಯ ಮತ್ತೊಂದು ಹುಳು ಕೆಂದರೆ ವಿದ್ಯಾನಿಲಯದ ಸ್ಥಳನಿರ್ದೇಶ. ಪಾಟ್ನಾದಿಂದ ಐದಾರು ಮೈಲಿಗಳ ದೂರದ ನಿವೇಶದಲ್ಲಿ ಕಾಲೇಜುಗಳನ್ನು ಕಟ್ಟಬೇಕೆಂದು ಯೋಜನಾಸಮಿತಿ ತೀರ್ಮಾನಿಸಿ ಸರ್ಕಾರಕ್ಕೆ ವರದಿ ಕಳಿಸಿತು. ಆದರೆ ಇದರಿಂದ ವಿದ್ಯಾರ್ಥಿಗಳಿಗೆ ಬಹಳ ತೊಂದರೆಯಾಗುತ್ತಿತ್ತು. ಹಾಸ್ಟಲಿನಲ್ಲಿ ಉಳಿದುಕೊಂಡು ಅತಿಯಾಗಿ ಖರ್ಚುಮಾಡಬೇಕಾಗು ತ್ತಿತ್ತು. ಇದೇ ಅಲ್ಲದೆ ಮತ್ತೂ ಕೆಲವು ಕಾರಣಗಳಿಗಾಗಿ ರಾಜೇಂದ್ರ ಪ್ರಸಾದರು ಈ ಮಸೂದೆಯ ವಿರುದ್ಧ ಚಳುವಳಿಯನ್ನಾರಂಭಿಸಿದರು. ಸಾರ್ವಜನಿಕರ ಬೆಂಬಲ ಇದಕ್ಕೆ ಬಹಳವಾಗಿ ಸಿಕ್ಕಿತು. ಪ್ರತಿ ಯೊಂದು ಜಿಲ್ಲೆಯುಲ್ಲಿಯೂ ಸಭೆಗಳು ನಡೆದುವು. ರಾಜೇಂದ್ರಪ್ರಸಾ ದರೂ ಅವರಗೆಳೆಯ ವೈದ್ಯನಾಥರೂ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಿಸಿದರು. ಐದಾರು ಸಣ್ಣ ಪುಸ್ತಕಗಳನ್ನು ಈ ವಿಷಯ ವಾಗಿ ಬರೆದು ಪ್ರಕಟಿಸಿದರು. ಬಿಹಾರಪ್ರಾಂತೀಯ ಸಭೆಯು ವಿಶೇಷ ಅಧಿವೇಶನ ನಡೆಸಿ ಮಸೂದೆಯನ್ನು ಖಂಡಿಸಿದರು. ಈ ಅಧಿವೇಶ ನದ ಅಧ್ಯಕ್ಷರು ಪಾಟ್ನಾದ ಹೆಸರಾಂತ ವಕೀಲ-ರಾವ್‌ಬಹದೂರ್ ಪೂರ್ಣೇಂದು ನಾರಾಯಣ ಸಿಂಹ ಅವರು. ಆಗಲೇ ೧೯೧೫ರ ಡಿಸೆಂಬರಿ ನಲ್ಲಿ ಲಕ್ನೋವಿನಲ್ಲಿ ಕಾಂಗ್ರೆಸ್ ಅಧಿವೇಶನವು ನಡೆಯಿತು. ಕಾಂಗ್ರೆಸ್ಸು ಬರಿಯ ಪ್ರಾಂತೀಯ ಸಮಸ್ಯೆಗಳನ್ನು ಚರ್ಚಿಸುತ್ತಿರಲಿಲ್ಲ ಪೂರ್ಣವಾಗಿ ದೇಶಕ್ಕೆಲ್ಲ ಅನ್ವಯಿಸುವ ವಿಷಯುಗಳನ್ನು ಮಾತ್ರ ಗಮನಿಸುತ್ತಿತ್ತು. ಆದರೂ ರಾಜೇಂದ್ರಪ್ರಸಾದರು ಅಲ್ಲಿ ಈ ವಿಶ್ವ ವಿದ್ಯಾನಿಲಯದ ಮಸೂದೆಯ ವಿರುದ್ಧ ನಿರ್ಣಯ ತಂದರು. ಅದು ಸಮಿತಿಯಿಂದ ಒಪ್ಪಿತವಾಯಿತು. ಇದರಿಂದ ಪಾಟ್ನಾ ವಿಶ್ವವಿದ್ಯಾ ನಿಲಯ ಮಸೂದೆಯ ವಿರುದ್ಧವಾಗಿ ದೇಶಾಂದ್ಯಂತ ಚಳುವಳಿ

ನಡೆಯಲು ಅನುವಾಯಿತು. ಆಗ ಸರ್ಕಾರ ಎಚ್ಚತ್ತಿತ್ತು. ಬಿಹಾರಿನವರ ಸಲಹೆ ಕೇಳಿ ಮಸೂದೆಯನ್ನು ಬದಲಾಯಿಸಿತು. ಕೊನೆಗೆ ಜನರ ಮನಸ್ಸಿನಲ್ಲಿದ್ದಂತೆಯೇ ವಿಶ್ವವಿದ್ಯಾನಿಲಯ ರೂಪಿತವಾಯಿತು.

ಸರ್ಕಾರದ ವಿರುದ್ಧವಾಗಿ ರಾಜೇಂದ್ರಪ್ರಸಾದರು ಹೋರಾಡಿ ಜಯಿಸಿದ ಮೊದಲನೆಯ ಘಟನೆ ಇದು. ೧೯೧೧ರಿಂದ ಕಾಂಗ್ರೆಸ್ ಸಮಿತಿಯ ಸದಸ್ಯರಾಗಿದ್ದರೂ ಅದರಲ್ಲಿ ಅಷ್ಟಾಗಿ ಗಮನಕೊಟ್ಟಿರಲಿಲ್ಲ. ಆದರೆ ಈಗ ಬಿಹಾರಿಗೆ ಬಂದು ಪಾಟ್ನಾದಲ್ಲಿ ನೆಲಸಿದಂದಿನಿಂದ ಸಾರ್ವಜನಿಕ ಕಾರ್ಯಗಳಲ್ಲಿ ಹೆಚ್ಚು ಆಸಕ್ತಿ, ಆದರ ಮೂಡಿ ಬಂದಿತು. ಕೆಲವೇ ದಿನಗಳಲ್ಲಿ ಬಿಹಾರ್ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಸಹಕಾರ್ಯದರ್ಶಿಯೂ ಆದರು. ಅಂದಿನಿಂದ ಕಾಂಗ್ರೆಸ್ಸಿನ ಕೆಲಸ ಕಾರ್ಯಗಳಲ್ಲಿ ರಾಜೇಂದ್ರಪ್ರಸಾದರು ಹೆಚ್ಚುಹೆಚ್ಚು ತೊಡಗಿದರು. ವಿಶ್ವವಿದ್ಯಾನಿಲಯ ಕೂಡ ಇವರನ್ನು ಸಾರ್ವಜನಿಕ ನಾಯಕರನ್ನಾಗಿ ಒಪ್ಪಿತು. ಸೆನೇಟಿಗೆ ರಾಜೇಂದ್ರಪ್ರಸಾದರು ನಿಯಮಿತರಾದರು :



೪

# ಗಾಂಧೀಜಿಯೊಂದಿಗೆ ಭೇಟಿ

೧೯೧೬ನೆಯ ಇಸವಿಯ ಲಕ್ನೋ ಕಾಂಗ್ರೆಸ್ ಅಧಿವೇಶನದಲ್ಲಿ ಬಿಹಾರಿನ ಚಂಪಾರಣ್ಯದ ಬಗ್ಗೆ ಮತ್ತೊಂದು ನಿರ್ಣಯವೂ ಅಂಗೀಕೃತವಾಯಿತು. ಲಕ್ನೋ ಅಧಿವೇಶನಕ್ಕೆ ಬಂದ ಪ್ರತಿನಿಧಿಗಳಲ್ಲಿ ಚಂಪಾರಣ್ಯ ಜಿಲ್ಲೆಯವರೂ ಬಹಳ ಮಂದಿ ಇದ್ದರು. ಅವರಲ್ಲಿ ರಾಜಕುಮಾರಶುಕ್ಲರೂ ಒಬ್ಬರು. ಇವರು ಅಲ್ಲಿಯ ಒಬ್ಬ ರೈತ. ಅಲ್ಪಸ್ವಲ್ಪ ಹಿಂದಿಯ ಹೊರತು ಬೇರೆ ಯಾವ ಭಾಷೆಯೂ ಬರುತ್ತಿರಲಿಲ್ಲ. ನೀಲಿಯ ದೊರೆಗಳ ಕೈಲಿ ಸ್ವತಃ ಕಷ್ಟ ಅನುಭವಿಸಿದ ಅವರು ಚಂಪಾರಣ್ಯದ ನೊಂದ ರೈತರಪರವಾಗಿ ಸಮ್ಮೇಳನಕ್ಕೆ ಬಂದಿದ್ದರು. ಶುಕ್ಲರಿಗೂ ರಾಜೇಂದ್ರಪ್ರಸಾದರಿಗೂ ಪರಿಚಯವಿತ್ತು. ಆಗಾಗ ಆ ರೈತರ ಮೊಕದ್ದಮೆಯನ್ನು ಹಣವಿಲ್ಲದೆಯೇ ರಾಜೇಂದ್ರ ಪ್ರಸಾದರು ನಡೆಸಿಕೊಟ್ಟಿದ್ದರು. ಆದರೆ ಬಾಬುವ್ರಜಕಿಶೋರರು ಅವರಿಗೆ ಹೆಚ್ಚು ನೆರವಾಗಿದ್ದವರು, ಅಲ್ಲದೆ ಚಂಪಾರಣ್ಯ ಜಿಲ್ಲೆಯ ಪರಿಸ್ಥಿತಿಯನ್ನು ಚೆನ್ನಾಗಿ ಬಲ್ಲವರು.

ಕರ್ಮವೀರ ಗಾಂಧಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದಿದ್ದರು. ಚಂಪಾರಣ್ಯದ ಕಾರ್ಯದಲ್ಲಿ ಅವರ ನೆರವು ತೆಗೆದುಕೊಳ್ಳಬೇಕೆಂದು ಎಲ್ಲರಿಗೂ ಗೊತ್ತು. ಶುಕ್ಲರು ಗಾಂಧೀಜಿಯ ಬಳಿ ಹೋಗಿ ತಮ್ಮ ಸಂಕಟಗಳನ್ನು ಹೇಳಿಕೊಂಡರು. ಗಾಂಧೀಜಿಯವರು ಈ ವಿಚಾರವನ್ನು ಅಧಿವೇಶನದಲ್ಲಿ ಪ್ರಸ್ತಾಪಿಸಬೇಕೆಂದೂ ಕೇಳಿಕೊಂಡರು. ಆದರೆ ತಾವು ಕಣ್ಣಾರೆ ಕಂಡ ಹೊರತು ತಾವು ಆ ವಿಷಯವನ್ನೆತ್ತುವುದಿಲ್ಲವೆಂದು ಗಾಂಧೀಜಿ ಹೇಳಿಬಿಟ್ಟರು. ಶುಕ್ಲರು ಬಹಳ ಬಲವಂತ ಮಾಡಿದಮೇಲೆ ತಾವು ಬೇಗನೆ ಬಿಹಾರಕ್ಕೆ ಬಂದು ಚಂಪಾರಣ್ಯದ ಸ್ಥಿತಿಗತಿಯನ್ನು ಕಣ್ಣಾರ ನೋಡುವುದಾಗಿ ಭರವಸೆಕೊಟ್ಟರು. ಅಧಿವೇಶನದಲ್ಲಿ ನಿರ್ಣಯ ಮಂಡಿಸಿದವರು ಬಾಬುವ್ರಜಕಿಶೋರರು. ಮೊತ್ತಮೊದಲು ಕಾಂಗ್ರೆಸ್ ಅಧಿವೇಶನದಲ್ಲಿ ಮಾತನಾಡಿದ ರೈತ

ರೆಂದರೆ ರಾಜಕುಮಾರಶುಕ್ಲ! ನಿರ್ಣಯವನ್ನು ಕಾಂಗ್ರೆಸ್ಸು ಅಂಗೀ ಕರಿಸಿತು.

ರಾಜೇಂದ್ರಪ್ರಸಾದರು ಗಾಂಧೀಜಿಯ ಹೆಸರು ಕೇಳಿದ್ದರು. ದಕ್ಷಿಣ ಆಫ್ರಿಕಾದಲ್ಲಿ ಏನೋ ಒಂದಿಷ್ಟು ಕೆಲಸ ಮಾಡಿರುವರು ಎಂದಷ್ಟು ಮಾತ್ರ ಗೊತ್ತಿತ್ತೇ ವಿನಹ ಮತ್ತೇನೂ ಗೊತ್ತಿರಲಿಲ್ಲ. ತಿಳಿದುಕೊಳ್ಳುವ ಆಸಕ್ತಿಯೂ ಇರಲಿಲ್ಲ. ಶುಕ್ಲರು ಗಾಂಧೀಜಿಯನ್ನು ಕಂಡುದಾಗಲೀ, ಅವರನ್ನು ಚಂಪಾರಣ್ಯಕ್ಕೆ ಕರೆದುದಾಗಲಿ, ಗಾಂಧೀಜಿ ಬರಲೊಪ್ಪಿದುದೇ ಆಗಲಿ ರಾಜೇಂದ್ರಪ್ರಸಾದರಿಗೆ ತಿಳಿಯದು. ಲಕ್ನೋ ಕಾಂಗ್ರೆಸಿನನಂತರ ಗಾಂಧೀಜಿ ಒಮ್ಮೆ ಕಲ್ಕತ್ತೆಗೆ ಬಂದಿದ್ದರು. ಆಗ ಶುಕ್ಲರನ್ನು ಕಾಣಲಾಗಲಿಲ್ಲ. ಅನಂತರ ಕಾಂಗ್ರೆಸ್ ಕಮಿಟಿಯ ಸಭೆ ಕಲ್ಕತ್ತೆಯಲ್ಲಿ ಆಗಬೇಕಾಯಿತು. ಆಗ ಗಾಂಧೀಜಿ ಕಲ್ಕತ್ತೆಗೆ ಎರಡನೆಯಬಾರಿ ಬಂದರು. ಅಲ್ಲಿಗೇ ಶುಕ್ಲರು ಬಂದು ಅವರ ಜತೆಗೆ ಚಂಪಾರಣ್ಯಕ್ಕೆ ಹೋಗಬೇಕೆಂದು ಗಾಂಧೀಜಿ ಶುಕ್ಲರೊಂಟಿಗೆ ಗೊತ್ತುಮಾಡಿಕೊಂಡಿದ್ದರು. ಇದು ಪ್ರಸಾದರಿಗೆ ತಿಳಿಯದು. ಕಾಂಗ್ರೆಸ್ ಕಮಿಟಿಯ ಸಭೆಯಲ್ಲಿ ಅಕ್ಕಪಕ್ಕದ ಕುರ್ಚಿಯಲ್ಲೇ ಕುಳಿತಿದ್ದರೂ ಒಬ್ಬರನ್ನೊಬ್ಬರು ಮಾತಾಡಿಸಲಿಲ್ಲ. ತಾವಾಗಿಯೇ ಬೇರೆಯವರ ಪರಿಚಯ ಮಾಡಿಕೊಳ್ಳುವುದು ರಾಜೇಂದ್ರಪ್ರಸಾದರ ಸ್ವಭಾವಕ್ಕೆ ವಿರುದ್ಧ. ಕಾಂಗ್ರೆಸ್ಸಿನ ಮಹಾಕಾರ್ಯದರ್ಶಿಯಾಗ ಬೇಕೆಂದು ಗಾಂಧೀಜಿಯನ್ನು ಎಲ್ಲರೂ ಕೇಳಿಕೊಂಡರೂ ಅವರು ಒಪ್ಪ ಲಿಲ್ಲ. ಇಷ್ಟೊಂದುಜನ, ಇಷ್ಟು ಬಲವಂತಮಾಡಿದರೂ ಒಪ್ಪದಿರು ವುದು ಸರಿಯಲ್ಲವೆಂದು ಪ್ರಸಾದರಿಗೆ ತೋರಿತು. ಅದು ಅಗೌರವ ಎಂದೂ ತೋಚಿದರೂ ಮಾತನಾಡಲಿಲ್ಲ! ಕಮಿಟಿಯ ಕೆಲಸ ಮುಗಿ ದೊಡನೆಯೇ ಗಾಂಧೀಜಿ ಹೊರಗೆ ಕಾದಿದ್ದ ಶುಕ್ಲರೊಂದಿಗೆ ಪಾಟ್ನಾಕ್ಕೆ ಹೊರಟುಹೋದರು. ರಾಜೇಂದ್ರಪ್ರಸಾದರು ಹೊರಗೆ ಬರುವುದು ಕೊಂಚ ತಡವಾದುದರಿಂದ ಅವರನ್ನು ಭೇಟಿಮಾಡಲಾಗಲಿಲ್ಲ. ಗಾಂಧೀಜಿಗೂ ಈತ ಬಿಹಾರಿನವನು, ಪಾಟ್ನಾದಲ್ಲಿ ಈತನ ಮನೆಗೇ ರಾಜಕುಮಾರ ಶುಕ್ಲರು ತಮ್ಮನ್ನು ಕರೆದೊಯ್ಯುತ್ತಿರುವುದು

ಎಂಬುದೂ ತಿಳಿಯದು. ಪಾಟ್ನಾದಲ್ಲಿ ರಾಜೇಂದ್ರರ ಮನೆಯಲ್ಲಿದ್ದ ಸೇವಕ ಗಾಂಧೀಜಿಯನ್ನು ಯಾರೋ ಹಳ್ಳಿಯ ಕಕ್ಷಿಗಾರನೆಂದು ಕೊಂಡು ತಿರಸ್ಕಾರದಿಂದ ನಡೆದುಕೊಂಡ. ಗಾಂಧೀಜಿ ಅಲ್ಲಿ ಕೊಂಚ ಹೊತ್ತಿದ್ದು ಮುಜಫರ್‌ಪುರಕ್ಕೆ ಹೋಗಿ ಅಲ್ಲಿ ಆಚಾರ್ಯ ಕೃಪಲಾನಿ ಯವರೊಂದಿಗೆ ಉಳಿದುಕೊಂಡರು. ಅಲ್ಲಿ ಕೆಲವರನ್ನು ಕಂಡು ಮಾತಾಡಿ, ಅಲ್ಲಿಂದ ಚಂಪಾರಣ್ಯಕ್ಕೆ ಹೋಗುವುದು ಅವರ ಯೋಚನೆ. ಬಾಬುವ್ರಜಕಿಶೋರರು ಇಬ್ಬರು ದ್ವಿಭಾಷಿಗಳನ್ನು-ವಕೀಲವೃತ್ತಿಯ ಬಿಹಾರಿಗಳು-ಗಾಂಧೀಜಿಯ ಬಳಿಗೆ ಕಳಿಸಿಕೊಟ್ಟರು. ಹಳ್ಳಿಯ ಜನರ ಮಾತು ಗಾಂಧೀಜಿಗೆ ಅರ್ಥವಾಗುತ್ತಿರಲಿಲ್ಲ. ಅದಕ್ಕಾಗಿ ಈ ದ್ವಿಭಾಷಿ ಗಳ ಅವಶ್ಯಕತೆಯಿತ್ತು. ಚಂಪಾರಣ್ಯಕ್ಕೆ ಹೋಗಿ ಅಲ್ಲಿನ ರೈತ ರೊಂದಿಗೆ ಮಾತನಾಡಿ ಅವರ ಕಷ್ಟಸುಖಗಳನ್ನು ಕೇಳಿ, ನೋಡಿ, ಸ್ಥಿತಿಗತಿ ತಿಳಿಯುವುದೇ ಗಾಂಧೀಜಿಯ ಉದ್ದೇಶ. ಗಾಂಧೀಜಿ ಮೋತಿಹಾರಿ ಪಟ್ಟಣಕ್ಕೆ ಬಂದೊಡನೆ ಚಂಪಾರಣ್ಯದ ಕಲೆಕ್ಟರ್ ಜಿಲ್ಲೆ ಬಿಟ್ಟು ಹೋಗಬೇಕೆಂದು ಆಜ್ಞೆಮಾಡಿದ. ಅದೇ ಇನ್ನೂ ಚಂಪಾ ರಣ್ಯದ ರೈತನೊಬ್ಬ ಬಂದು ತನ್ನ ಮನೆಮಠ ಲೂಟಿಯಾದುದನ್ನು ಗಾಂಧೀಜಿಗೆ ಹೇಳಿ ಹೋಗಿದ್ದ. ಗಾಂಧೀಜಿ ಜಿಲ್ಲೆಯನ್ನು ಬಿಟ್ಟು ಹೊರಡಲು ನಿರಾಕರಿಸಿದ್ದರಿಂದ ಅವರ ಮೇಲೆ ಮೊಕದ್ದಮೆ ಹಾಕಿದರು. ಅದೇ ದಿನ ರಾಜೇಂದ್ರಪ್ರಸಾದ್ ಪಾಟ್ನಾಕ್ಕೆ ಬಂದಿದ್ದರು. ಈ ಎಲ್ಲಾ ವಿಚಾರಗಳನ್ನು ತಂತಿಯ ಮೂಲಕ ಅವರಿಗೆ ತಿಳಿಸಿ ಅವರನ್ನು ಕರೆಸಿದ್ದರು. ಬಾಬುವ್ರಜಕಪೋರ್, ಅನುಗ್ರಹ ನಾರಾಯಣ ಮುಂತಾದವರೊಂದಿಗೆ ರಾಜೇಂದ್ರರು ಮೋತಿಹಾರಿಗೆ ಹೋದರು. ಅವರು ಅಲ್ಲಿಗೆ ಮಧ್ಯಾಹ್ನ ಮೂರುಗಂಟೆಯ ಹೊತ್ತಿಗೆ ತಲುಪಿದರು. ಆ ವೇಳೆಗೆ ಮೊಕದ್ದಮೆಯ ವಿಚಾರಣೆ ನಡೆದು ತೀರ್ಪುಮಾತ್ರ ಕೊಡು ವುದು ಉಳಿದಿತ್ತು. ಇನ್ನು ಮೂರು-ನಾಲ್ಕು ದಿನದಲ್ಲಿ ತೀರ್ಪು ತಿಳಿ ಯುತ್ತಿತ್ತು.

ಗಾಂಧೀಜಿ ಬಾಬುಗೋರಖಪ್ರಸಾದರ ಮನೆಯಲ್ಲಿ ಇಳಿದು ಕೊಂಡಿದ್ದರು. ರಾಜೇಂದ್ರಪ್ರಸಾದರನ್ನು ಪರಿಚಯಮಾಡಿಕೊಡು

ತ್ತಲೇ ನಗುತ್ತ "ನಾನು ನಿಮ್ಮ ಮನೆಗೆ ಹೋಗಿದ್ದೆ" ಎಂದರು. ಮನೆಯಲ್ಲಿ ಸೇವಕ ತೋರಿದ ತಿರಸ್ಕಾರದ ಸುದ್ದಿಯನ್ನು ರಾಜೇಂದ್ರರು ಈಗಾಗಲೇ ಕೇಳಿದ್ದರು. ಈಗ ನಾಚಿಕೆಯಿಂದ ತಲೆ ತಗ್ಗಿಸಿದರು. ಗಾಂಧೀಜಿ ಕೋರ್ಟಿನಲ್ಲಿ ನಡೆದುದನ್ನೆಲ್ಲ ತಿಳಿಸಿದರು. ಅದೇ ರಾಜೇಂದ್ರಪ್ರಸಾದರಿಗೆ ಗಾಂಧೀಜಿಯೊಂದಿಗೆ ಮೊದಲಭೇಟಿ, ಮೊದಲನೆಯ ಸಂಪರ್ಕ. ಗಾಂಧೀಜಿಯ ಈ ಮೊದಲಭೇಟಿಯಲ್ಲಿ ರಾಜೇಂದ್ರರ ಮನಸ್ಸಿನ ಮೇಲೆ ಹೆಚ್ಚೇನು ಪ್ರಭಾವವಾಗಲಿಲ್ಲ! ರಾಜೇಂದ್ರರಿಗೆ ಚಂಪಾರಣ್ಯದ ವಿಷಯ ಸ್ವಲ್ಪಸ್ವಲ್ಪ ಗೊತ್ತಿತ್ತು. ಎಷ್ಟೋಬಾರಿ ವ್ರಜಕಿಕೋರರಿಗೂ, ರಾಜಕುಮಾರಶುಕ್ಲರಿಗೂ ನೆರವಾಗಿದ್ದರು. ಏನಾಗುತ್ತದೋ ಅದನ್ನು ಮಾಡೋಣವೆಂದುಕೊಂಡಿದ್ದರು. ಆದರೆ ಅವರಿಗೆ ಸ್ವಪ್ನದಲ್ಲಿಯೂ ಜೈಲಿಗೆ ಹೋಗುವ ಜಟಿಲಸಮಸ್ಯೆ ಏಳುವುದೆಂದು ತೋಚಿಯೇ ಇರಲಿಲ್ಲ!

ಗಾಂಧೀಜಿಯ ಮಾಯಾವ್ಯಕ್ತಿತ್ವ ಅಂತಹುದು! ಎಲ್ಲರೂ ಅವರ ಮಾತಿನಂತೆ ಸೆರೆಮನೆಗೆ ಹೋಗಲು ಸಿದ್ಧರಾದರು. ಗಾಂಧೀಜಿ ಜೈಲಿಗೆ ಹೋಗಲು ಸಿದ್ಧರಾದರೆ ತಾವು ಹಿಂತೆಗೆಯುವುದು ನಾಚಿಕೆಗೇಡೆಂದು ಬಿಹಾರಿನ ವಕೀಲರಿಗೆ ಅನಿಸಿತು. ತಾವೂ ಗಾಂಧೀಜಿಯೊಂದಿಗೆ ಜೈಲಿಗೆ ಬರಲು ಸಿದ್ಧರೆಂದು ಅವರು ಹೇಳಿದುದರಿಂದ ಗಾಂಧೀಜಿಗೆ ಬಹಳ ಸಂತೋಷವಾಯಿತು. "ನಮ್ಮ ಕೆಲಸ ಖಂಡಿತವಾಗಿಯೂ ಸಫಲವಾಗುತ್ತದೆ" ಎಂದು ಅವರು ಭರವಸೆಯಿಂದ ಮಾತನಾಡಿದರು. ಒಂದು ತಂಡವಾದಮೇಲೆ ಒಂದುತಂಡ ಕೆಲಸಕ್ಕೆ ಸಿದ್ಧವಾಗಬೇಕು. ಜೈಲಿಗೆ ಒಂದು ತಂಡವನ್ನು ಹಾಕಿದರೆ ಮತ್ತೊಂದು ತಂಡದವರು ಅವರ ಜಾಗಕ್ಕೆ ಬಂದು ಕೆಲಸ ನಡೆಸಬೇಕೆಂದು ತೀರ್ಮಾನವಾಯಿತು. ರಾಜೇಂದ್ರಪ್ರಸಾದರೂ ಒಂದು ತಂಡದ ನಾಯಕರಾಗಿ ನೇಮಿತರಾದರು. ಆದರೆ ಸರ್ಕಾರ ಗಾಂಧೀಜಿಯ ಮೇಲಿದ್ದ ಪ್ರತಿಬಂಧಕವನ್ನು ತೆಗೆದುಹಾಕಿತು. ಚಂಪಾರಣ್ಯದಲ್ಲಿ ಎಲ್ಲಿಬೇಕಾದರೂ ಹೋಗಿ ಸುದ್ದಿ ಸಂಗ್ರಹ ಮಾಡಲು ಅವಕಾಶಕೊಟ್ಟಿತು. ಅಂದಿನಿಂದ ಚಂಪಾರಣ್ಯದ ಹಳ್ಳಿಯ ರೈತರ ಸಾಕ್ಷ್ಯ ಬರೆದುಕೊಳ್ಳಲು ಆರಂಭವಾಯಿತು. ಸಾವಿ

ರಾರು ಸಂಖ್ಯೆಯಲ್ಲಿ ರೈತರು ಬಂದು ಸಾಕ್ಷ್ಯಕೊಟ್ಟರು. ಅದನ್ನು ರಾಜೇಂದ್ರಪ್ರಸಾದರೂ ಉಳಿದ ವಕೀಲರೂ ಬರೆದುಕೊಳ್ಳುತ್ತಿದ್ದರು. ತಾವು ಅಂದುಕೊಂಡುದಕ್ಕಿಂತ ಪರಿಸ್ಥಿತಿ ವಿಪರೀತ ಕೆಡುಕಾಗಿದೆ ಯೆಂದು ಎಲ್ಲರಿಗೂ ಈಗ ಅರಿವಾಯಿತು.

ಅಂದು ರಾಜೇಂದ್ರಪ್ರಸಾದರು ತಾವಾಗಿಯೇ ಮನಃಪೂರ್ವಕ ವಾಗಿಯೇ ಗಾಂಧೀಜಿಯ ತೆಕ್ಕೆಗೆ ಬಿದ್ದರು. ದಿನಕಳೆದಂತೆ ಅವರಲ್ಲಿ ಪ್ರೇಮ ಹೆಚ್ಚಿದುದಷ್ಟೇ ಅಲ್ಲ, ಅವರ ಕಾರ್ಯರೀತಿಯಲ್ಲಿ ನಂಬಿಕೆ, ವಿಶ್ವಾಸ ಹೆಚ್ಚಿದುವು. ಚಂಪಾರಣ್ಯದ ಕೆಲಸ ಮುಗಿಯುವ ವೇಳೆಗೆ ಪ್ರಸಾದರೂ ಉಳಿದ ಎಲ್ಲರೂ ಗಾಂಧೀಜಿಯವರ ಅನನ್ಯಭಕ್ತರೂ, ಕಾರ್ಯಕ್ರಮ ನಡೆಸುವ ಸ್ವಯಂಸೇವಕರೂ ಆಗಿಬಿಟ್ಟರು.

---

೫

## ಚಂಪಾರಣ್ಯ

ಚಂಪಾರಣ್ಯ ಬಿಹಾರಿನ ತಿರ್ಹತ್ ಜಿಲ್ಲೆಗೆ ಸೇರಿದುದು. ಇಲ್ಲಿ ರೈತರ ಮೇಲೆ ಆಗುತ್ತಿದ್ದ ಅತ್ಯಾಚಾರ, ದಬ್ಬಾಳಿಕೆಗೆ ಕೊನೆ ಮೊದಲೇ ಇರಲಿಲ್ಲ. ಇಲ್ಲಿನ ಜಮೀನಿಗೆ ಮಾಲೀಕರು ಇಂಗ್ಲಿಷ್‌ನವರು. ಅವರು ಅಲ್ಲಿ ನೀಲಿಯ ಕಾರ್ಖಾನೆಗಳನ್ನು ಸ್ಥಾಪಿಸಿದ್ದುದರಿಂದ ಅವರನ್ನು ನೀಲಿಯ ದೊರೆಗಳೆನ್ನುತ್ತಿದ್ದರು. ಇವರು ತೆರತೆರದ ರೀತಿಯಲ್ಲಿ ರೈತರಿಗೆ ಹಿಂಸೆ ಕೊಡುತ್ತಿದ್ದರು. ಅಲ್ಲಿನ ರೈತರು ಕಡ್ಡಾಯವಾಗಿ ನೀಲಿಯನ್ನು ಬೆಳೆಯಬೇಕಾಗಿತ್ತು. ತಮ್ಮ ಜಮೀನಿನಲ್ಲಿ ಮೂರನೆಯ ಒಂದು ಭಾಗದಲ್ಲಾದರು ನೀಲಿಯ ಬೆಳೆ ಬೆಳೆಯಬೇಕಾಗಿತ್ತು. ಇದಕ್ಕೆ ತಿನಕಠಿಯ ಎಂದು ಹೆಸರು. ಯಾವನಾದರೂ ರೈತ ಹಾಗೆ ನೀಲಿ ಬೆಳೆಯಲು ನಿರಾಕರಿಸಿದರೆ ಅವನ ಮನೆ ಸುಟ್ಟು ಆಸ್ತಿಪಾಸ್ತಿಯನ್ನೆಲ್ಲ ಲೂಟಿಮಾಡುತ್ತಿದ್ದರು. ಕಾನೂನು ಕೂಡ ಈ ನೀಲಿಯ ದೊರೆಗಳಿಗೇ ಸಹಾಯಕವಾಗಿತ್ತು. ಪೊಲೀಸಿನವರು, ಸರ್ಕಾರದವರು ನೀಲಿಯ ದೊರೆಗಳಿಗೇ ಬೆಂಬಲವಾಗಿದ್ದರು. ಹೀಗಾಗಿ ರೈತರ ಅಹವಾಲನ್ನೇ ಕೇಳುವವರಿರಲಿಲ್ಲ. ಈ ಮಧ್ಯೆ ಇದ್ದಕ್ಕಿದ್ದಂತೆ ನೀಲಿಯ ಬೆಲೆ ಇಳಿಯಿತು. ಜರ್ಮನಿಯಲ್ಲಿ ರಾಸಾಯನಿಕವಾಗಿ ನೀಲಿಯನ್ನು ತಯಾರಿಸುವ ರೀತಿ ಕಂಡುಹಿಡಿದುದರಿಂದ ಚಂಪಾರಣ್ಯದ ನೀಲಿಯನ್ನೇ ಕೇಳುವವರಿರಲಿಲ್ಲ. ಆಗ ನೀಲಿಯ ದೊರೆಗಳು ತಮ್ಮ ರೈತರ ಮೇಲೆ ಬೇರೊಂದು ರೀತಿಯ ದಬ್ಬಾಳಿಕೆ ನಡೆಸಿದರು. ಯಾವನಾದರೂ ರೈತ ನೀಲಿ ಬೆಳೆಯಲು ನಿರಾಕರಿಸಿದರೆ ಅವನ ಮೇಲಿನ ಕಂದಾಯವನ್ನು ಹೆಚ್ಚು ಮಾಡಬಹುದೆಂದು ಒಂದು ಕಾನೂನಿತ್ತು. ಈಗ ಅದನ್ನು ಈ ನೀಲಿಯ ದೊರೆಗಳು ದುರುಪಯೋಗಪಡಿಸಿಕೊಂಡರು. ಯಾವ ರೈತನೂ ನೀಲಿಯನ್ನು ಬೆಳೆಯಬೇಕಾಗಿಲ್ಲವೆಂದು ತಿಳಿಸಿ, ಅವರಿಂದ ಹಣದ ರೂಪವಾಗಿ ತೆರ ವಸೂಲು ಮಾಡಲಾರಂಭಿಸಿದರು. ಅಷ್ಟೇ

ಅಲ್ಲ. ಇಲ್ಲದ ಜಮೀನುಗಳ ಹೆಸರಿನಲ್ಲಿ ಹೆಚ್ಚು ಕಂದಾಯ ಕೀಳ ಲಾರಂಭಿಸಿದರು. ಹಿಂಸೆ ಮಾಡಿ ರೈತರಿಂದ ಪತ್ರ ಬರೆಸಿಕೊಂಡು ಒಂದಕ್ಕೆ ನಾಲ್ಕರಷ್ಟು ಹತ್ತರಷ್ಟು ಕಂದಾಯ ಹೆಚ್ಚಿಸಿದರು. ರೈತರು ತಾವು ಕಾಣದ, ಭೂಮಿಯಮೇಲಿಲ್ಲದ ಜಮೀನುಗಳಿಗೂ ಕಂದಾಯ ಕೊಡಬೇಕಾಗಿ ಬಂತು. ಅವರು ತುಟಿಪಿಟಿಕ್ಕೆನ್ನುವಂತಿರಲಿಲ್ಲ. ಸರ್ಕಾರೀ ಅಧಿಕಾರಿಗಳೆಲ್ಲ ಈ ನೀಲಿಯ ದೊರೆಗಳ ಕೈಕೆಳಗಿದ್ದರು. ಅಲ್ಲದೆ ಈ ನೀಲಿಯ ದೊರೆಗಳಲ್ಲೊಬ್ಬ ಆ ಪ್ರದೇಶದ ಆಡಳಿತದ ಮೇಲ್ವಿಚಾರಕನಾಗಿ ನೇಮಿತನಾದುದು ಸುಲಿಗೆಗೆ ಇನ್ನು ಅನುಕೂಲ ವಾಯಿತು. ಹೀಗಾಗಿ ನೀಲಿಯನ್ನು ಬೆಳೆಯಲು ಇಷ್ಟವಿಲ್ಲದಿರುವಾಗ ಬಲವಂತವಾಗಿ ಅದನ್ನು ಬೆಳೆಯುವಂತೆ ಮಾಡುತ್ತಿದ್ದರು. ಈಗ ತಮಗೆ ನೀಲಿ ಬೇಡದಾಗ ಅದೇ ನೆವದಿಂದ ರೈತರ ರಕ್ತ ಹಿಂಡು ತ್ತಿದ್ದರು. ಅಂತೂ ನಿರಾತಂಕವಾಗಿ ಸುಲಿಗೆ ಸಾಗುತ್ತಿತ್ತು. ೧೯೧೪ ರಲ್ಲಿ ಯೂರೋಪಿನಲ್ಲಿ ಮಹಾ ಯುದ್ಧ ಆರಂಭವಾದೊಡನೆಯೇ ಜರ್ಮನಿಯಿಂದ ನೀಲಿ ಬರುವುದು ನಿಂತಿತು. ಮತ್ತೆ ಚಂಪಾರಣ್ಯದ ನೀಲಿಗೆ ಬೆಲೆ ಬಂತು. ಕೂಡಲೇ ಮಾಲೀಕರು ತಿನ್‌ಕಠಿಯ ಪದ್ಧತಿ ಯನ್ನು ಜಾರಿಗೆ ತಂದರು. ಕಂದಾಯ ಹೆಚ್ಚಾದುದೂ ಅಲ್ಲದೆ ನೀಲಿ ಯನ್ನು ಕಡ್ಡಾಯವಾಗಿ ಬೆಳೆಯಲೇ ಬೇಕಾದ ಕೆಟ್ಟ ಪರಿಸ್ಥಿತಿ ರೈತ ರಿಗೆ ಒದಗಿತ್ತು. ಬಾಯಿತೆರೆದು ತಮ್ಮ ದುಃಖ ತೋಡಿಕೊಳ್ಳುವಂ ತಿರಲ್ಲಿಲ್ಲ. ಹಾಗೇನಾದರೂ ತುಟಿಪಿಟಿಕ್ಕೆಂದರೆ ಮನೆಮಠ ಹಾಳಾಗಿ ಜೀವಕ್ಕೇ ಕುತ್ತೊದಗುತ್ತಿತ್ತು. ನೀಲಿಯ ದೊರೆಗಳು ತಮ್ಮ ಕೋಠಿ ಗಳನ್ನು ಬಲಪಡಿಸಿಕೊಂಡಿದ್ದರು. ಈಗ ಯುದ್ಧಕಾಲವಾದ್ದರಿಂದ ಕೊಂಚ ಗಲಾಟೆಯಾದರೂ ಅದು ಯುದ್ಧಕ್ಕೆ ಕೆಡುಕೆಂದು ಗಲಾಟೆ ಮಾಡಿ ಅಡಗಿಸಬಹುದಾಗಿತ್ತು. ಕಾನೂನಿನ ರೀತಿಯಾಗಿ ಇವರ ಮೇಲೆ ನ್ಯಾಯಾಲಯಗಳಲ್ಲಿ ಏನೂ ಮಾಡುವಂತೆಯೂ ಇರಲಿಲ್ಲ. ಅಂತಹುರದಿಲ್ಲೂ ಹನ್ನೊಂದು ಜನ ರೈತರು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ಈ ಮೊಕದ್ದಮೆಗಳಲ್ಲಿ ಐದು ರೈತರ ಪರ ವಾಯಿತು. ಆದರೆ ಅವರ ಮನೆಮಠಗಳನ್ನು ರಾತ್ರೋರಾತ್ರಿ ಸುಟ್ಟು

ಹಾಕಿಬಿಟ್ಟರು. ಹೀಗೆ • ಮೊಕದ್ದಮೆ ಹಾಕುವುದೆಂದರೆ ನಾಲ್ವತ್ತು ಐವತ್ತು ಸಾವಿರ ಮೊಕದ್ದಮೆ ಹಾಕಬೇಕಾಗುತ್ತಿತ್ತು. ಹೀಗಾಗಿ ಗಾಂಧೀಜಿಯವರು ಭಾರತದಲ್ಲಿ ಮೊತ್ತಮೊದಲಿಗೆ ತಮ್ಮ ಹೊಸ ವಿಧಾನ ಅಹಿಂಸಾತ್ಮಕ ಚಳವಳಿಯನ್ನು ಇಲ್ಲಿ ಉಪಯೋಗಿಸಿದರು.

ಬೆನ್ನು ಮೂಳೆಯೇ ಮುರಿದಂತಾಗಿದ್ದ ರೈತರಿಗೆ ಗಾಂಧೀಜಿ ಸಂಜೀವನದಂತೆ ಬಂದರು. ಕತ್ತೆತ್ತಿ ನೋಡಲು ಕೂಡ ಧೈರ್ಯ ವಿಲ್ಲದ ರೈತರು ಈಗ ಏನೋ ಧೈರ್ಯ ಪಡೆದುಕೊಂಡರು. ತಮ್ಮನ್ನು ಉದ್ಧಾರ ಮಾಡುವ ಮಹಾಪುರುಷ ಬಂದಿರುವನು. ಆತನಲ್ಲಿ ಸಂಪೂರ್ಣವಾಗಿ ನಂಬಿಕೆಯಿಡಬೇಕು. ಭರವಸೆಯಿಡಬೇಕೆಂದು ಅವ ರಿಗೆ ತೋರಿತು. ಗಾಂಧೀಜಿಯವರು ಕೂಡ ಮೊದಲು ಇಲ್ಲಿ ನಾಲ್ಕು ದಿವಸ ಇದ್ದು ಹೋಗುವ ಯೋಚನೆಯಲ್ಲಿದ್ದರು ಆದರೆ ಇಲ್ಲಿ ಬಂದು ನೋಡಿದಾಗ ಸ್ಥಿತಿ ವಿಪರೀತ ಹದಗೆಟ್ಟತ್ತೆಂದು ತಿಳಿಯಿತು. ರಾಜ ಕುಮಾರ ಶುಕ್ಲರು ಲಕ್ನೋವಿನಲ್ಲಿ ತಮಗೆ ಹೇಳಿದ್ದ ಕತೆ ಬರಿಯ ಉತ್ಪ್ರೇಕ್ಷೆಯೆಂದು ಆಗ ಅಂದುಕೊಂಡಿದ್ದರು. ಇಲ್ಲಿ ನಿಜಸ್ಥಿತಿ ನೋಡಿ ದರೆ ಅವರು ಹೇಳಿದ್ದರ ಸಾವಿರದಷ್ಟು ಭೀಕರವಾಗಿತ್ತು. ತಕ್ಷಣವೇ ರೈತರ ಹೇಳಿಕೆಗಳನ್ನು ತೆಗೆದುಕೊಳ್ಳುವ ಕಾರ್ಯವನ್ನು ಆರಂಭಿಸಿ ದರು. ರಾಜೇಂದ್ರಪ್ರಸಾದರು ಅವರ ಬಲಗೈ ಆದರು. ಆಗ ರೈತರು ಸಾವಿರ ಸಾವಿರ ಸಂಖ್ಯೆಯಲ್ಲಿ ಹೇಳಿಕೆ ಕೊಡಲು ಬರುತ್ತಿದ್ದರು. ಈ ಕಾಲದಲ್ಲಿಯೇ ಗಾಂಧೀಜಿಯವರ ಪ್ರಭಾವ ರಾಜೇಂದ್ರರ ಮೇಲೆ ತೀವ್ರವಾಗಿ ಮೂಡಿದುದು.

ಹೇಳಿಕೆ ತೆಗೆದುಕೊಳ್ಳಲು ಇದ್ದವರೆಲ್ಲ ಪ್ರತಿಷ್ಠಿತ ವಕೀಲರು. ಅವರೆಲ್ಲರೂ ತಮ್ಮ ಜತೆಯಲ್ಲಿ ಒಬ್ಬೊಬ್ಬ ಆಳನ್ನು ಒಬ್ಬ ಅಡಿಗೆಯವ ನನ್ನು ಕರೆತಂದಿದ್ದರು. ಗಾಂಧೀಜಿಗೆ ಇದು ಒಗ್ಗಲಿಲ್ಲ. ಕೆಲಸ ಮಾಡು ವುದು ಒಂದೇ ರೀತಿಯದು. ಅದೂ ಜಾತಿ ಮತಬಿಟ್ಟು ಮಾರಿದ ಕೆಲಸ. ಹಿಂದೂ ರೈತರು, ಮುಸಲ್ಮಾನ್ ರೈತರೆಂಬ ವ್ಯತ್ಯಾಸವಿರ ಲಿಲ್ಲ. ಹೇಳಿಕೆ ತೆಗೆದುಕೊಳ್ಳುವವರೂ ತಮ್ಮ ಜಾತಿ ವ್ಯತ್ಯಾಸಗಳನ್ನು ಮರೆತು ಒಂದಿಗೇ ಇರಬೇಕೆಂದು ಗಾಂಧೀಜಿಯ ಅಭಿಪ್ರಾಯ. ಅಲ್ಲದೆ

ಈ ರೀತಿಯ ಮೇಲುಮಟ್ಟದ ಜೀವನದಿಂದ ಅವರ ಕೆಲಸಕ್ಕೂ ತೊಂದರೆಯಾಗುತ್ತಿತ್ತು. ಕೊನೆಗೆ ಎಲ್ಲರನ್ನು ಕರೆಸಿ ಅವರವರ ಆಳುಗಳನ್ನೂ ಅಡಿಗೆಯವರನ್ನೂ ಕಳಿಸಿಬಿಡಬೇಕೆಂದು ಹೇಳಿದರು. ಅಲ್ಲದೆ ಎಲ್ಲರೂ ಒಂದೇ ಕೆಲಸ ಮಾಡುತ್ತಿರುವವರು—ಒಂದೇ ಜಾತಿಯೆಂದುಕೊಳ್ಳಬೇಕು. ತಾವೆಲ್ಲ ಮತ್ತೊಬ್ಬರ ಕಾಲ ಮೇಲೆ ನಿಲ್ಲಕೂಡದು. ತಮ್ಮ ಕೆಲಸ ತಾವೇ ಮಾಡಿಕೊಳ್ಳಬೇಕೆಂದೂ ತಿಳಿಯಹೇಳಿದರು. ಅವರ ಮಾತಿನ ಮೋಡಿಯೇ ಅಂತಹುದು. ಎಲ್ಲರೂ ಆಳುಗಳನ್ನು ಕಳಿಸಿಬಿಟ್ಟು ತಾವೆ ಸೇರಿ ಅಡಿಗೆ ಮಾಡುತ್ತಿದ್ದರು. ಒಬ್ಬೊಬ್ಬರು ಒಂದೊಂದು ಕೆಲಸವನ್ನು ಹಂಚಿಕೊಂಡು ಮಾಡುತ್ತಿದ್ದರು. ರಾಜೇಂದ್ರಪ್ರಸಾದರು ಈತನಕ ಜಾತಿಯ ಕಟ್ಟನ್ನು ಬಹಳವಾಗಿ ಅನುಸರಿಸಿದ್ದರು. ಬ್ರಾಹ್ಮಣರಲ್ಲದವರು ಮುಟ್ಟಿದುದನ್ನು ಅವರು ತಿನ್ನುತ್ತಿರಲಿಲ್ಲ. ಈಗ ಈ ಕುರುಡು ನಿಯಮವೆಲ್ಲ ಹಾರಿಹೋಯಿತು. ಜಾತಿಭೇದದ ಕಲ್ಪನೆ ಹಾರಿತು. ಅಲ್ಲದೆ ಸೇವಾಮನೋಭಾವ ಬೆಳೆಯಿತು ಜತೆಗೆ ತಮ್ಮ ಕೆಲಸ ತಾವೇ ಮಾಡಿಕೊಳ್ಳುವ ಅಭ್ಯಾಸ ಬೆಳೆಯಿತು. ಮೊದಲು ಯಾವ ರೀತಿಯ ಶಿಸ್ತೂ ಇರಲಿಲ್ಲ. ಆಳಿದ್ದುದರಿಂದ ರಾತ್ರಿ ೧೨ ಅಥವಾ ೧ ಗಂಟೆಗೂ ಬಂದು ಊಟಮಾಡುತ್ತಿದ್ದರು. ಈಗ ಅದೆಲ್ಲ ನಡೆಯುತ್ತಿರಲಿಲ್ಲ. ನಿಯಮಿತ ಕಾಲದಲ್ಲಿ ಊಟ, ಕ್ಲಿಪ್ತಕಾಲದಲ್ಲಿ ಕೆಲಸ. ಇದರಿಂದ ಆರೋಗ್ಯಕ್ಕೂ, ಕೆಲಸಕ್ಕೂ ಅನುಕೂಲವೇ ಆಯಿತು. ಬೆಳಿಗ್ಗೆ ೬ ಗಂಟೆಯ ವೇಳೆಗೆ ಸ್ನಾನಾದಿಗಳನ್ನು ಮುಗಿಸಿ ಹೇಳಿಕೆ ಬರೆದುಕೊಳ್ಳಲು ಕುಳಿತುಕೊಳ್ಳುತ್ತಿದ್ದರು. ಹನ್ನೊಂದು ಗಂಟೆಯತನಕ ರೈತರನ್ನು ಪ್ರಶ್ನಿಸಿ ಉತ್ತರ ತಿಳಿದು ಹೇಳಿಕೆ ಬರೆದುಕೊಳ್ಳುವುದು. ಅನಂತರ ಊಟ. ಮತ್ತೆ ೧ ಗಂಟೆಗೆ ಬರಹ ಆರಂಭ. ಸಂಜೆ ೫ ಗಂಟೆಗೆ ಇದನ್ನು ನಿಲ್ಲಿಸಿ ಸಂಜೆಯ ಊಟ ಮುಗಿಸಿ ಗಾಂಧೀಜಿಯೊಡನೆ ಸುತ್ತಾಡಲು ಹೊರಡುತ್ತಿದ್ದರು. ಬಹಳ ಮುಖ್ಯವಾದ ಹೇಳಿಕೆಯಿದ್ದರೆ ಅದನ್ನು ಕೂಡಲೇ ಗಾಂಧೀಜಿಗೆ ತಿಳಿಸುತ್ತಿದ್ದರು. ಇಲ್ಲವೇ ಬರೆದ ಹೇಳಿಕೆಗಳನ್ನೆಲ್ಲಾ ಅವರಿಗೆ ಕೊಡುತ್ತಿದ್ದರು. ಸುಮಾರು ಇಪ್ಪತ್ತು ಇಪ್ಪತ್ತೈದು ಸಾವಿರ ರೈತರು ಸಾಕ್ಷ್ಯ

ಕೊಟ್ಟರು. ಇದರಿಂದ ಜಿಲ್ಲೆಯಲ್ಲಿ ಎಲ್ಲ ಕಡೆಯು ಕೋಲಾಹಲವಾಯಿತು. ಹೆಚ್ಚುಹೆಚ್ಚು ರೈತರು ಬಂದುದರಿಂದ ಹೇಳಿಕೆ ಬರೆಯುವವರೂ ಎರಡು ಪಂಗಡಗಳಾಗಿ ಒಂದು ಪಂಗಡ ಬೇರೆಯ ಹಳ್ಳಿಯಲ್ಲಿ ಮತ್ತೊಂದು ಮೋತೀಹಾರಿಯಲ್ಲಿ ನಿಂತಿತು. ಆಗಾಗ ಗಾಂಧೀಜಿ ಹಳ್ಳಿಗಳಿಗೆ ಹೋಗಿಬರುತ್ತಿದ್ದರು; ವಿಶೇಷ ಸುದ್ದಿಗಾಗಿ ಯಾರನ್ನಾದರೂ ಒಬ್ಬರನ್ನು ಕಳಿಸುತ್ತಿದ್ದರು.

ಈ ಕಾಲದಲ್ಲೇ ಭಾರತದಲ್ಲೆಲ್ಲಾ (ಹೋಂರೂಲು) ಸ್ವರಾಜ್ಯದ ಆಂದೋಲನ ನಡೆಯುತ್ತಿತ್ತು. ಚಂಪಾರಣ್ಯದಲ್ಲಿ ಕೆಲಸ ಮಾಡುತ್ತಿದ್ದವರಿಗೆಲ್ಲಾ ತಾವು ಈ ಸ್ವರಾಜ್ಯ ಚಳವಳಿಯಲ್ಲಿ ಕೆಲಸ ಮಾಡಲು ಆಗಲಿಲ್ಲವಲ್ಲ ಎಂದು ಅಸಮಾಧಾನವಾಗಿತ್ತು. ಗಾಂಧೀಜಿಯವರಿಗೆ ಇದನ್ನು ಹೇಳಿಯೂ ಹೇಳಿದರು. ಆಗ ಗಾಂಧೀಜಿ ನೀವು ನಿಜವಾದ ಹೋಂರೂಲು ಕೆಲಸ ಮಾಡುತ್ತಿರುವಿರಿ. ಇದಕ್ಕಿಂತ ಹಿರಿಯ ಸ್ವರಾಜ್ಯದ ಕೆಲಸವಿಲ್ಲ. ನೀವು ಆ ಚಳವಳಿಯಲ್ಲಿ ಭಾಗ ವಹಿಸದಿದ್ದರೂ ಚಿಂತೆಯಿಲ್ಲ" ಎಂದರು. ಸರ್ಕಾರದವರು ಯಾವುದಾದರೂ ತಪ್ಪು ಹಿಡಿದು ತೊಂದರೆ ತರಬಹುದೆಂದು ಗಾಂಧೀಜಿ ಅವರೆಲ್ಲರಿಗೂ ಮುನ್ನೆಚ್ಚರಿಕೆ ಕೊಟ್ಟಿದ್ದರು. ಯಾರೂ ಎಲ್ಲಿಯೂ ಸಭೆ ನಡೆಸಕೂಡದು. ಭಾಷಣ ಮಾಡಕೂಡದೆಂದು ಗಾಂಧೀಜಿಯ ಕಟ್ಟಪ್ಪಣೆ. ಈ ಅಪ್ಪಣೆಯನ್ನು ಎಲ್ಲರೂ ಅಕ್ಷರಶಃ ಪಾಲಿಸಿದರು.

ರೈತರು ನೀಲಿಯ ದೊರೆಗಳ ಮೇಲೆಯೇ ಅಲ್ಲದೆ ಹಳ್ಳಿಯ ಜಿಲ್ಲೆಯ ಅಧಿಕಾರಿಗಳ ಮೇಲು ದೂರ ಕೊಡುತ್ತಿದ್ದರು. ನೀಲಿಯ ದೊರೆಗಳ ವರ್ಚಸ್ಸು ಹೋಯಿತು. ನಮ್ಮ ಅಧಿಕಾರವೂ ಎಲ್ಲಿ ಕಳಚುವುದೋ ಎಂದು ಅಧಿಕಾರಿಗಳಿಗೆ ಹೆದರಿಕೆಯಾಗಿ ಸುಳ್ಳುಸುಳ್ಳು ವರದಿಯನ್ನು ಪ್ರಾಂತೀಯ ಅಧಿಕಾರಿಗಳಿಗೆ ಕಳಿಸಿದರು. ಸರ್ಕಾರದ ಪ್ರತಿನಿಧಿಯೊಬ್ಬ ಗಾಂಧೀಜಿಯನ್ನು ಭೇಟಿಮಾಡಿ ಅವರಿಂದ ವಿಷಯ ತಿಳಿದುಕೊಂಡು ಸರ್ಕಾರಕ್ಕೆ ವರದಿಯೊಪ್ಪಿಸಿದ. ಇಲ್ಲಿ ಹೇಳಿಕೆ ತೆಗೆದುಕೊಳ್ಳುವ ಕೆಲಸ ಮುಂದೆ ಸಾಗಿತು. ಅಲ್ಲದೆ ಹಳ್ಳಿಗಳಿಗೆ ಸುತ್ತಿಬರುವುದೂ ಹೆಚ್ಚಾಯಿತು. ಈ ಕಾಲದಲ್ಲೇ ಗಾಂಧೀಜಿಯವರು ಹಲವು

ನೀಲಿಯ ದೊರೆಗಳ ಪರಿಚಯ ಕೂಡ ಮಾಡಿಕೊಂಡರು. ನೀಲಿಯ ದೊರೆಗಳು ತಾವು ಹೇಳಬೇಕಾದುದನ್ನು ಹೇಳುತ್ತಿದ್ದರು. ತಮ್ಮ ಪರಸಾಕ್ಷಿಸಿಗುವಂತಹ ಸ್ಥಳಗಳಿಗೆ ಗಾಂಧೀಜಿಯನ್ನು ಕರೆದೊಯ್ಯುತ್ತಿದ್ದರು.

ಗಾಂಧೀಜಿಯ ಈ ರೀತಿ ಎಲ್ಲರಿಗೂ ಹೊಸದು. ಈ ರೀತಿಯ ಕೆಲಸವನ್ನು ಮೊದಲು ಯಾರೂ ಮಾಡಿರಲಿಲ್ಲ. ಯಾವುದಾದರೂ ಸಭೆಯಲ್ಲಿ ಕಾಂಗ್ರೆಸ್ಸಿನಲ್ಲಿ ಅಧಿವೇಶನದಲ್ಲಿ ಭಾಷಣ ಮಾಡುವುದು, ಕೋರ್ಟಿಗೆ ಮೊಕದ್ದಮೆ ತರುವುದು, ಕೌನ್ಸಿಲ್ಲಿನಲ್ಲಿ ಚರ್ಚೆ ಹೂಡುವುದು, ಇದಿಷ್ಟೇ ಸೇವಾಕಾರ್ಯದ ಸಾಧನೆಯೆಂದು ಈತನಕ ಎಲ್ಲರೂ ನಂಬಿದ್ದರು. ಇದಕ್ಕಿಂತ ಹೆಚ್ಚು ಏನು ತಾನೆ ಸಾಧ್ಯ ಎಂದೂ ಅವರ ನಂಬಿಕೆ ! ಆದರೆ ಗಾಂಧೀಜಿ ಈ ಕೆಲಸಗಳನ್ನೊಂದನ್ನೂ ಮಾಡಲಿಲ್ಲ. ರೈತರ ಹೇಳಿಕೆ ತೆಗೆದುಕೊಂಡು ವಿಷಯವನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಯತ್ನಿಸಿದರು. ಈ ಹೇಳಿಕೆ ಕೊಡುವುದರಿಂದಲೇ ರೈತರ ಭಯಭೀತಿಯೆಲ್ಲಾ ಕರಗಿದವು. ರಾಜೇಂದ್ರರಿಗೂ ತಾವು ಕನಸಿನಲ್ಲಿಯೂ ಎಣಿಸದಂತಹ ವಿಷಯಗಳು ಇದರಿಂದ ತಿಳಿಯಿತು !

ಚಂಪಾರಣ್ಯದಲ್ಲಿ ಗಾಂಧೀಜಿ ಅಹಿಂಸಾತ್ಮಕ ಚಳುವಳಿ ನಡೆಸಿದರು. ಅವರು ರಾಜೇಂದ್ರರಿಗೂ ಉಳಿದವರಿಗೂ ಕಲಿಸಿದ ಅಹಿಂಸೆಯ ಪಾಠಕ್ಕೆ ಒಂದು ಉದಾಹರಣೆ ಕೊಡಬಹುದು. ಹೇಳಿಕೆ ಬರೆದುಕೊಳ್ಳಲು ಎರಡು ಪಂಗಡಗಳಿದ್ದವು. ಈ ಹೇಳಿಕೆಗಳನ್ನು ಬರೆದುಕೊಳ್ಳುವಾಗ ಹತ್ತಿರದಲ್ಲಿಯೇ ಪೋಲೀಸ್ ದಫೇದಾರರೂ, ಸಬ್ ಇನ್‌ಸ್ಪೆಕ್ಟರೂ ಹತ್ತಿರದಲ್ಲಿ ಇರುತ್ತಿದ್ದರು. ನೀಲಿಯ ದೊರೆಗಳ ಪರವಾಗಿಯೂ ಒಬ್ಬ ಇದ್ದು ರೈತರ ಹೆಸರುಗಳನ್ನೆಲ್ಲಾ ತಾನೆ ಬೇರೆ ವಿವರವಾಗಿ ಬರೆದುಕೊಳ್ಳುತ್ತಿದ್ದ. ಒಬ್ಬ ವಕೀಲರು ಹೇಳಿಕೆ ಬರೆದುಕೊಳ್ಳುತ್ತಿದ್ದರು. ಪಕ್ಕದಲ್ಲೇ ಸಬ್‌ಇನ್‌ಸ್ಪೆಕ್ಟರ್ ಬಂದು ಕೇಳಿದ ಕೊಂಚಹೊತ್ತಿನ ನಂತರ ವಕೀಲರು ಅಲ್ಲಿಂದೆದ್ದು ಹೋಗಿ ಬೇರೆಕಡೆ ಕುಳಿತರು. ಅಲ್ಲಿಗೂ ಸಬ್‌ಇನ್‌ಸ್ಪೆಕ್ಟರು ಹೋಗಲು ಆ ವಕೀಲರಿಗೆ ಕೋಪ ಬಂತು. 'ನೀವು ನೋಡಬೇಕಾದರೆ

ದೂರದಲ್ಲಿ ಕೂತು ನೋಡಿ. ಹತ್ತಿರಕ್ಕೆ ಬರಬೇಡಿ' ಎಂದು ಸಬ್ ಇನ್‌ಸ್ಪೆಕ್ಟರನ್ನು ಗದರಿಕೊಂಡರು. ಆತ ಗಾಂಧೀಜಿಯಬಳಿ ಬಂದು ದೂರು ಕೊಟ್ಟ. "ನಮಗೆ ಮೇಲಿನಿಂದ ಹುಕುಂ ಬಂದಿದೆ. ಏನೆಲ್ಲ ಆಗುವುದೋ ಅದನ್ನು ವರದಿ ಮಾಡಬೇಕು. ನಿಮ್ಮ ಕಡೆಯವರು ನಮ್ಮನ್ನು ಹತ್ತಿಕ್ಕೆ ಬಿಡದಿದ್ದರೆ ನಾವು ಹೇಗೆತಾನೇ ನಮ್ಮ ಕೆಲಸ ಮಾಡುವುದು?" ಎಂದು ಕೇಳಿದ. ಗಾಂಧೀಜಿ ಆ ವಕೀಲರನ್ನು ಕರೆಸಿ ಕೇಳಿದರು. ಆತ ನಿಜವನ್ನೇ ಹೇಳಿದ. ಆಗ ಗಾಂಧೀಜಿ "ನೀವು ಒಬ್ಬರೇ ಇದ್ದೀರೋ" ಎಂದು ಕೇಳಿದರು. ತುಂಬಾ ಜನ ರಿದ್ದಾರೆಂದು ಉತ್ತರಬಂತು. 'ನೀವು ಯಾವುದಾದರೂ ಗುಪ್ತವಾದ ಕೆಲಸ ಮಾಡುತ್ತಿದ್ದೀರೋ ಎಲ್ಲರಿಗೂ ತಿಳಿದಕೆಲಸವೋ' ಎಂದರು ಗಾಂಧೀಜಿ. ಗುಪ್ತವಲ್ಲದೆ ಎಲ್ಲರಿಗೂ ತಿಳಿದ ಕೆಲಸವೇ ಆದಮೇಲೆ ಈ ಸಬ್‌ಇನ್‌ಸ್ಪೆಕ್ಟರಿಂದ ಬಚ್ಚಿಡಲು ಯಾಕೆ ಪ್ರಯತ್ನಿಸಬೇಕೆಂದು ಕೇಳಿ ದರು. ಆಗ ವಕೀಲರು ಈತ ಬಹಳ ಹತ್ತಿರದಲ್ಲಿ ಕುಳಿತುದರಿಂದ ಕೆಲಸ ಸಾಗುತ್ತಿರಲಿಲ್ಲ. ಆದ್ದರಿಂದ ದೂರ ಕುಳಿತುಕೊಳ್ಳಲು ಹೇಳಿ ದೆನೆಂದರು. ಆಗ ಗಾಂಧೀಜಿ "ನಿಮ್ಮ ಸುತ್ತ ಅಷ್ಟೊಂದು ರೈತರು, ಮುತ್ತಿಕೊಂಡಿದ್ದರೂ ನಿಮಗೆ ತೊಂದರೆಯಾಗಲಿಲ್ಲ. ಈ ಸಬ್‌ಇನ್ ಸ್ಪೆಕ್ಟರು ಕುಳಿತಿದ್ದರಿಂದ ತೊಂದರೆಯಾಯಿತೋ? ಇವರೂ ಆ ರೈತರ ಲ್ಲೊಬ್ಬರೆಂದೇ ತಿಳಿದು ಕೆಲಸಮಾಡಿ" ಎಂದುಬಿಟ್ಟರು. ಇದರಿಂದ ಧೈರ್ಯವಾಗಿ, ಮುಚ್ಚುಮರೆಯಿಲ್ಲದೆ ಕೆಲಸಮಾಡುವ ಪ್ರವೃತ್ತಿ ಸ್ವಯಂಸೇವಕರಿಗೆ ಬಂದಿತು. ಪೋಲೀಸ್ ಇನ್‌ಸ್ಪೆಕ್ಟರು ತನ್ನ ಹಿರಿಮೆ ಹೆಚ್ಚಿಸಿಕೊಳ್ಳಬೇಕು, ತಲೆಗೊಂದು ಗರಿಹಚ್ಚಿಕೊಳ್ಳಬೇಕೆಂದು ಗಾಂಧೀಜಿಯವರ ಬಳಿ ದೂರುತಂದಿದ್ದ. ಈಗ ತನ್ನನ್ನು ರೈತನೆಂದು ದರಿಂದ ಆತನಿಗೆ ಬಹಳ ಅವಮಾನವಾಯಿತು. ಅಂದಿನಿಂದ ಹೇಳಿಕೆ ತೆಗೆದುಕೊಳ್ಳುವ ಕಡೆಯಲ್ಲಿ ಪೋಲೀಸರ ನೆರಳೇ ಬಿಳುತ್ತಿರಲಿಲ್ಲ

ಈ ಕಾಲದಲ್ಲೇ ದೀನಬಂಧು ಆಂಡ್ರ್ರೂಸರು ಅಲ್ಲಿಗೆ ಭೇಟಿ ಕೊಟ್ಟದ್ದು. ಅವರೂ ಅಲ್ಲಿದ್ದರೆ ತಮಗೆ ನೆರವಾಗುತ್ತದೆಯೆಂದು ರಾಜೇಂದ್ರ ಮತ್ತಿತರರ ಅಭಿಪ್ರಾಯವಿತ್ತು. ಆದರೆ ಗಾಂಧೀಜಿ

ಯವರು ಅವರನ್ನು ಅಲ್ಲಿ ಉಳಿಸಿಕೊಳ್ಳಲಿಲ್ಲ. ಈತ ಇಂಗ್ಲೀಷಿನವನು ಇಂಗ್ಲೀಷಿನವರ ವಿರುದ್ಧ ನಿಂತರೆ ತಮಗೆ ಸಹಾಯವೆಂದು ಉಳಿದವರು ಬಗೆದುದು ಹೇಡಿತನದ, ಹೆದರಿಕೆಯ ಲಕ್ಷಣವೆಂದು ಗಾಂಧೀಜಿ ಅಂದುಬಿಟ್ಟರು. ಆಂಡ್ರೂಸರು ಅಲ್ಲಿ ಉಳಿದು ಕೊಳ್ಳಲಿಲ್ಲ. ರಾಜೇಂದ್ರ ಪ್ರಸಾದರಿಗೂ ಆಂಡ್ರೂಸರಿಗೂ ಆದ ಆಜೀವ ಗೆಳೆತನ ಮೂಡಿಬಂತು!

ಒಮ್ಮೆ ಒಬ್ಬ ನೀಲಿಯದೊರೆ ಬಂದು ತನ್ನ ರೈತರು ಬಹಳ ಸುಖಿಗಳೆಂದೂ, ತಾನು ಒಳ್ಳೆಯ ಮಾಲೀಕನೆಂದೂ, ಹೇಳಿಕೊಂಡು ಗಾಂಧೀಜಿಯನ್ನೂ ರಾಜೇದ್ರಪ್ರಸಾದರನ್ನೂ ತನ್ನ ಕೋಠಿಗೆ ಬರಹೇಳಿದ. ಆ ಕೋಠಿಯಲ್ಲಿ ಒಂದು ಸಭೆ ಏರ್ಪಡಿಸಲು ಎಲ್ಲಾ ಸಿದ್ಧತೆಯಾಗಿತ್ತು. ಅವನಿಗೆ ಬೇಕಾದ ನಾಲ್ಕಾರು ರೈತರಿಗೆ ಲಂಚಕೊಟ್ಟು ತನ್ನ ಪರವಾಗಿ ಮಾತನಾಡಲು ನಿಯಮಿಸಿದ್ದ. ಈ ಸಭೆಗೆ ಅಲ್ಲಿನ ಪೋಲೀಸ್ ಅಧಿಕಾರಿಗಳೂ, ನ್ಯಾಯಾಧಿಕಾರಿಗಳೂ ಬಂದಿದ್ದರು. ಗಾಂಧೀಜಿಯೂ ರಾಜೇಂದ್ರಪ್ರಸಾದರೂ ಅಲ್ಲಿಗೆ ಹೋಗುವಾಗ ದಾರಿಯಲ್ಲಿ ರೈತರು ಅವರನ್ನು ಭೇಟಿಮಾಡಿ ನೀಲಿಯದೊರೆಯ ತಂತ್ರವನ್ನು ಹೇಳಿದರು ಗಾಂಧೀಜಿ ಈ ರೈತರನ್ನು ಅಲ್ಲಿಗೆ ಬರಹೇಳಿ, ಅಲ್ಲಿ ಧೈರ್ಯವಾಗಿ ತಮ್ಮ ಅಹವಾಲು ಹೇಳಬೇಕೆಂದು ಸೂಚಿಸಿದರು. ಸಭೆಯಲ್ಲಿ ನೀಲಿಯ ದೊರೆಗಳ ಪರವಾಗಿ ಕೆಲವರು ಮಾತನಾಡಿದೊನೆಯೇ ರೈತರು ತಮ್ಮ ಮೇಲೆ ನಡೆಯುತ್ತಿದ್ದ ಅತ್ಯಾಚಾರವನ್ನು ವರ್ಣಿಸಿದರು. ಪೋಲೀಸ್ ಮತ್ತು ನ್ಯಾಯಾಧಿಕಾರಿಗಳ ತಂತ್ರವನ್ನು ಬಯಲುಮಾಡಿದರು. ಆಗ ಈ ಅಧಿಕಾರಿಗಳು ಮೇಲಕ್ಕೆ ವರದಿಮಾಡಿದರು. ಇಲ್ಲಿ ಸ್ಥಿತಿ ಹದಗೆಟ್ಟಿದೆ. ಅನಾಯಕತೆ ಮೂಡಿದೆ. ಹೀಗೆಯೇ ಬಿಟ್ಟರೆ ರಾಜ್ಯಕ್ಕೆ ಹಾನಿಯೆಂದು ಇವರ ವರದಿ ಬಂದೊಡನೆಯೇ ಗವರ್ನರರು ಗಾಂಧೀಜಿಗೆ ಹೇಳಿಕಳುಹಿಸಿದರು. ಗಾಂಧೀಜಿ ತಾವು ಈ ವರಗೆ ಕೂಡಿಸಿದ್ದ ಹೇಳಿಕೆಗಳ ಆಧಾರದ ಮೇಲೆ ಒಂದು ವರಿದಿಯನ್ನು ಗವರ್ನರಿಗೆ ಕೊಟ್ಟರು. ಆಗ ಗವರ್ನರ್ ಒಂದು ವಿಚಾರಣಾ ಸಮಿತಿಯನ್ನು ರಚಿಸಿದರು. ಸರ್ಕಾರದ ಪ್ರತಿನಿಧಿ, ನೀಲಿಯದೊರೆಗಳ ಪ್ರತಿನಿಧಿಗಳ ಜತೆಗೆ ರೈತರ ಪ್ರತಿನಿಧಿಯಾಗಿ ಗಾಂಧೀಜಿಯೂ ಆ ಸಮಿತಿಯಲ್ಲಿ

ದ್ದರು. ಎಲ್ಲರೂ ಒಮ್ಮತದಿಂದ ಸರ್ಕಾರಕ್ಕೆ ಕಳುಹಿಸಿದ ಸಿಫಾರಸಿನ ಮೇಲೆ ಚಂಪಾರಣ್ಯದ ರೈತರಿಗೆ ನ್ಯಾಯಸಿಕ್ಕಿತು. ನೀಲಿಯಬೆಳೆ ಬೆಳೆಯಬೇಕೆಂಬ ತಿನ್ ಕಠಿಯಾ ಕಾನೂನು ರದ್ದಾಯಿತು. ಅತಿಯಾಗಿ ವಸೂಲಾಗಿದ್ದ ಕರದಲ್ಲಿ ಕೆಲಭಾಗ ರೈತರಿಗೆ ವಾಪಸಾಗಬೇಕೆಂದು ಗೊತ್ತಾಯಿತು. ಹೀಗೆ ಚಂಪಾರಣ್ಯದ ಚಳುವಳಿ ಅಹಿಂಸೆಯ ಮೊದಲ ಜಯ. ಇದೇನೋ ಎಲ್ಲರಿಗೂ ಪೂರ್ಣ ಸಮಾಧಾನ ತರಲಿಲ್ಲ. ತಾವು ಕೊಟ್ಟಿದ್ದೆಲ್ಲ ಹಿಂದಕ್ಕೆ ಬರಬೇಕಾಗಿತ್ತೆಂದು ರೈತರ ಅಭಿಪ್ರಾಯವಿತ್ತು. ರೈತರಿಂದ ಕಿತ್ತುಕೊಂಡ ಜಮೀನೆಲ್ಲಾ ಅವರಿಗೇ ಹಿಂದಕ್ಕೆ ಬರಬೇಕೆಂದು ರಾಜೇಂದ್ರ ಮತ್ತಿತರರ ಅಭಿಮತ. ಆದರೆ ಆ ಪರಿಸ್ಥಿತಿಯಲ್ಲಿ ಇಷ್ಟಾದುದೇ ಹೆಚ್ಚು. ಎರಡು ಮೂರು ವರ್ಷದಲ್ಲೇ ನೀಲಿಯದೊರೆಗಳು ಇಲ್ಲಿನ್ನು ತಮಗೆ ಲಾಭವಿಲ್ಲವೆಂದು ತಿಳಿದು ತಮ್ಮ ಜಮೀನುಗಳನ್ನು ಸುಲಭ ಬೆಲೆಗೆ ರೈತರಿಗೇಮಾರಿ ಹೊರಟು ಹೋದಮೇಲೆ ಇದು ಪೂರ್ಣ ವಿಜಯವೆಂದು ಎಲ್ಲರಿಗೂ ಅರಿವಾಯಿತು.

ಈ ಕೆಲಸ ತೀರಿದೊಡನೆಯೇ ಗಾಂಧೀಜಿ ಚಂಪಾರಣ್ಯದ ಮೂರು ತಾಲ್ಲೂಕುಗಳಲ್ಲಿಯೂ ಮೂರು ಶಾಲೆತೆರೆದರು. ಶಾಲೆಗಳಿಗೆ ಹಣಕೊಟ್ಟವರು ನೀಲಿಯ ದೊರೆಗಳೇ ! ಗಾಂಧೀಜಿಯವರು ನೀಲಿಯದೊರೆಗಳ ವಿರುದ್ಧ ಹೋರಾಡಿದರೂ, ತಮ್ಮ ನಯರೀತಿಯಿಂದ, ಶತ್ರುವನ್ನು ಮಿತ್ರನಂತೆ ಕಾಣುವ ಅಹಿಂಸೆಯ ತೇಜದಿಂದ, ಎಲ್ಲರನ್ನೂ ತಮ್ಮ ಸ್ನೇಹಿತರನ್ನಾಗಿಸಿಕೊಂಡರು. ನೀಲಿಯದೊರೆಗಳು ಗಾಂಧೀಜಿಯಲ್ಲಿ ಗೆಳೆತನ ಬೆಳೆಸಿದರು. ಶಾಲೆಗಾಗಿ ಸಾರ್ವಜನಿಕ ಕೆಲಸಕ್ಕಾಗಿ ಚಂದಾಕೊಟ್ಟರು ಗಾಂಧೀಜಿಯನ್ನು ತಮ್ಮಲ್ಲಿ ಕರೆಸಿಕೊಂಡು ಆದರಿಸಿದರು. ಈ ಚಂಪಾರಣ್ಯ ವಿಜಯದಿಂದ ಬಿಹಾರದಲ್ಲಿ ದೊಡ್ಡ ಕೋಲಾಹಲವೇ ಆಯಿತು. ಈ ತನಕ ಅಲ್ಲಿ ಯಾವ ರಾಜಕೀಕೀಯ ಸಂಘಟನೆಯೂ ಆಗಿರಲಿಲ್ಲ. ಎಲ್ಲಾ ವಿಷಯಗಳಲ್ಲಿಯೂ ಬಿಹಾರ ಹಿಂದುಳಿದಿತ್ತು. ಬಂಗಾಲದಿಂದ ಬೇರೆಯಾದುದಂತೂ ಕೆಲವು ವರ್ಷಗಳ ಹಿಂದೆ. ಕಾಂಗ್ರೆಸ್ ಸಂಸ್ಥೆಕೂಡ ಅಲ್ಲಿ ಬಲ

ವಾಗಿ ಬೇರೂರಲಿಲ್ಲ. ಅಲ್ಲಿ ಸದಸ್ಯರೆಲ್ಲ ತಮ್ಮ ತಮ್ಮ ಕೆಲಸದಲ್ಲಿ ಮಗ್ನರಾಗಿದ್ದು, ಆಗೊಮ್ಮೆ ಈಗೊಮ್ಮೆ ಒಂದು ಭಾಷಣಕೊಟ್ಟು ದೇಶಸೇವೆಯಾಯಿತೆಂದುಕೊಳ್ಳುತ್ತಿದ್ದರು. ಸಂಪೂರ್ಣವಾಗಿ ದೇಶ ಸೇವೆಯ ಕಾರ್ಯದಲ್ಲಿ ಯಾರೂ ಮಗ್ನರಾಗಿರಲಿಲ್ಲ. ಉಳಿದ ಪ್ರಾಂತ್ಯ ಗಳಲ್ಲಿ ಅಂತಹವರು ಬಹಳ ಮಂದಿ ಇದ್ದರು. ಚಂಪಾರಣ್ಯಕ್ಕೆ ಗಾಂಧೀಜಿಯೊಂದಿಗೆ ಕೆಲಸಮಾಡಲು ಹೋದ ಬಿಹಾರಿನವರೆಲ್ಲರೂ ವಕೀಲರೇ, ಅವರೆಲ್ಲರೂ ನಾಲ್ಕಾರು ದಿನಗಳಲ್ಲಿ ಚಂಪಾರಣ್ಯದ ಕೆಲಸ ಮುಗಿಯುವುದು, ಅನಂತರ ತಮ್ಮ ತಮ್ಮ ಕೆಲಸಕ್ಕೆ ತಾವು ಗಮನ ಕೊಡಬಹುದೆಂದುಕೊಂಡು ಬಂದರು. ಆದರೆ ನಾಲ್ಕು ದಿನಕ್ಕೆ ಬದಲು ಹತ್ತಾರು ತಿಂಗಳು ಇರಬೇಕಾಯಿತು. ಕೆಲಸ ಹೆಚ್ಚುತ್ತಲೇಹೋ ಯಿತು. ಸೆರೆಮನೆಯ ಮಾತುಬಂದು ಅದಕ್ಕೆ ಸಿದ್ಧರಾದರು. ಎಲ್ಲಕ್ಕೂ ಹೆಚ್ಚಾಗಿ ತಮ್ಮ ಪ್ರಾಂತ್ಯದಲ್ಲಿ ತಮ್ಮ ಕಣ್ಣೆದುರಿಗೇ ಇಷ್ಟೆಲ್ಲ ಅತ್ಯಾ ಚಾರವಾಗುತ್ತಿದ್ದರೂ ಈತನಕ ಕಣ್ಣಿಗೆ ಬೀಳದಿದ್ದುದು ಈಗ ಅವರಿಗೆ ಕಣ್ಣು ತೆರೆಯಿತು. ಸೇವಾಕಾರ್ಯಕ್ಕೆ ಮನಸ್ಸು ತೊಡಗಿತು. ಗಾಂಧೀಜಿ ಯವರ ಅಹಿಂಸೆ, ಸತ್ಯಪ್ರಿಯತೆ, ಸರಳಜೀವನ ಮತ್ತು ಜಾತ್ಯೇಕತೆ ಗಳು ರಾಜೇಂದ್ರರ ಮನಸ್ಸಿನ ಮೇಲೂ ಉಳಿದವರ ಮೇಲೂ ಆಳವಾದ ಅಚ್ಚೊತ್ತಿದ್ದವು. ಪ್ರಾಂತ್ಯದಲ್ಲಿ ಹೊಸ ಉತ್ಸಾಹ, ಹೊಸತೇಜಸ್ಸು, ಹೊಸವಿಚಾರಗಳ ಹೊಳೆ ಹರಿದುವು. ಎಲ್ಲಿಯವರೆಗೆ ತಮ್ಮ ಪ್ರಾಂತ್ಯ ದಿಂದಲೇ ಕೆಲವರು ತಮ್ಮ ಎಲ್ಲಾ ಸಮಯವನ್ನು ದೇಶಸೇವೆಗಾಗಿ ಕೊಡುವುದಿಲ್ಲವೋ ಅಲ್ಲಿಯತನಕ ಬಿಹಾರಿನ ಸಾರ್ವಜನಿಕ ಜೀವನಕ್ಕೆ ಜೀವವಿರುವುದಿಲ್ಲವೆಂದು ಎಲ್ಲರಿಗೂ ತಿಳಿಯಿತು. ಚಂಪಾರಣ್ಯದ ಕೆಲಸ ಮುಗಿದೊಡನೆಯೇ ಪೂನಾದ ಫರ್ಗ್ಯುಸನ್ ಕಾಲೇಜಿನ ತೆರ ದಲ್ಲಿ ಒಂದು ರಾಷ್ಟ್ರೀಯ ಕಾಲೇಜನ್ನು ತೆರೆಯಬೇಕೆಂದು ಯೋಚಿಸಿ ದರು. ತಮಗೆ ಅತಿ ಅವಶ್ಯವಾದಷ್ಟು ಮಾತ್ರ ಸಂಬಳ ತೆಗೆದು ಕೊಂಡು ಪೂರ್ಣವಾಗಿ ಸಂಸ್ಥೆಗೇ ದುಡಿಯುವ ಯೋಚನೆ ಮಾಡಿದರು. ಕಾಲೇಜಿಗಾಗಿ ಹಣಕೂಡಿಸುವ ಯೋಚನೆಯೂ ಬಂದು ಕೆಲವರು ವಾಗ್ದಾನಮಾಡಿದರು. ಮಹಾತ್ಮ ಗಾಂಧೀಜಿ ಯವರಿಗೆ ಈ ವಿಷಯ

ಹೇಳಿದಾಗ ಅಂತಹ ಸಂಸ್ಥೆ ಬೇಕು. ಆದರೆ ಕಾಲೇಜು ತೆರೆಯುವುದು ಅಂತಹ ಒಳ್ಳೆಯ ಯೋಜನೆಯಲ್ಲವೆಂದು ಅವರು ಅಭಿಮತಕೊಟ್ಟರು.

ಚಂಪಾರಣ್ಯದಲ್ಲಿ ನೀಲಿಯ ಆಂದೋಲನ ನಡೆಯುತ್ತಿದ್ದಾಗ ದೇಶದಲ್ಲೆಲ್ಲಾ ಸ್ವರಾಜ್ಯ ಚಳುವಳಿಸಾಗಿತ್ತು. ಬಿಹಾರಿನಲ್ಲಿಕೂಡ ಉಳಿದ ಜಿಲ್ಲೆಗಳಲ್ಲಿ ಈ ಚಳುವಳಿ ಜೋರಾಗಿಯೇ ಸಾಗಿತು. ಚಂಪಾರಣ್ಯದ ಚಳುವಳಿ ಮುಗಿವ ವೇಳೆಗೆ ಮಾಂಟೆಗ್ಯೂ-ಚೆಲ್ಮ್ಸ್‌ಫರ್ಡ್ ಸುಧಾರಣೆಗಳು ಸೂಚಿತವಾಗಿದ್ದವು. ದೇಶಕ್ಕೆ ಹೆಜ್ಜೆ ಹೆಜ್ಜೆಯಾಗಿ ಸ್ವಾತಂತ್ರ್ಯ ಕೊಡುವ ವಾಗ್ದಾನ ಆ ಸುಧಾರಣೆಗಳಲ್ಲಿತ್ತು. ಬಾಬು ರಾಜೇಂದ್ರ ಪ್ರಸಾದರು ಸ್ವಭಾವತಃ ಮಂದಗಾಮಿಗಳು. ಉಗ್ರ ಗಾಮಿಗಳ ಜೊತೆಗೆ ಎಂದೂ ಕೂಡದವರು. ಈಗಲೂ ಅವರು ಮಂದಗಾಮಿಗಳಾಗಿ ತಮ್ಮ ಅಭಿಪ್ರಾಯ ಸೂಚಿಸಿದರು. ಈ ಸುಧಾರಣೆಗಳ ಚರ್ಚೆಗಾಗಿ ೧೯೧೮ ರಲ್ಲಿ ಕಾಂಗ್ರೆಸ್ಸಿನ ವಿಶೇಷಅಧಿವೇಶನ ಮುಂಬಯಿಯಲ್ಲಿ ಸೇರಿತು. ಅಲ್ಲಿ ರಾಜೇಂದ್ರ ಪ್ರಸಾದರೂ ಇದ್ದು ಉಗ್ರಮತ್ತು ಮಂದಪಕ್ಷಗಳ ತಿಕ್ಕಾಟವನ್ನು ಕಣ್ಣಾರೆ ಕಂಡರು. ಅದೇ ವರ್ಷವೇ ಇಂದೂರಿನಲ್ಲಿ ಅಖಿಲ ಭಾರತ ಹಿಂದೀ ಸಾಹಿತ್ಯ ಸಮ್ಮೇಳನ ಗಾಂಧೀಜಿಯ ಅಧ್ಯಕ್ಷತೆಯಲ್ಲಿ ನಡೆಯಿತು. ದಕ್ಷಿಣ ಭಾರತದಲ್ಲಿ ಹಿಂದೀ ಪ್ರಚಾರ ನಡೆಸುವ ತೀರ್ಮಾನವನ್ನು ಆಗ ಮಾಡಿದರು ಈ ಸಮ್ಮೇಳನ ಮುಗಿಸಿಕೊಂಡು ರಾಜೇಂದ್ರಪ್ರಸಾದರು ಗಾಂಧೀಜಿಯೊಂದಿಗೆ ಸಾಬರ್ಮತಿ ಆಶ್ರಮಕ್ಕೆ ಹೋದರು. ಆಗ ಗಾಂಧೀಜಿಯೊಂದಿಗೆ ಅಲ್ಲಿನ ಹಳ್ಳಿಗಳಲ್ಲಿ ಸುತ್ತಾಡಿ ಬರುವ ಸುಯೋಗ ಅವರದಾಯಿತು. ಆಗ ಗಾಂಧೀಜಿ ಬರಿ ಕಾಲಿನಲ್ಲಿಯೇ ನಡೆಯುತ್ತಿದ್ದರು, ಚಪ್ಪಲಿ ಹಾಕುತ್ತಿರಲಿಲ್ಲ. ರಾಜೇಂದ್ರರೂ ಕಾಲು ಸುಡುತ್ತಿದ್ದರೂ ಹಾಗೆಯೇ ಮಾಡಿದರು. ಆಗಲೇ ಖೇದಾದ ಕಂದಾಯದ ನಿರಾಕರಣೆಯ ಸತ್ಯಾಗ್ರಹ ಗುಜರಾತಿನಲ್ಲಿ ನಡೆದುದು. ಆಗ ಅದರಲ್ಲಿಯೂ ಜಯ ಸಿಕ್ಕಿತು.

ರಾಜೇಂದ್ರಪ್ರಸಾವರು ಪಾಟ್ನಾಕ್ಕೆ ಹಿಂತಿರುಗಿದರು. ಇನ್ನೂ ದೇಶಸೇವೆಯ ಭಾವನೆ ನಿರ್ಧಾರವಾಗಿ ಮನಸ್ಸಿಗೆ ಹತ್ತಿರಲಿಲ್ಲ. ಆದ್ದ

ರಿಂದ ಈಗ ತಮ್ಮ ಕರ್ತವ್ಯ ಮುಗಿಯಿತೆಂದುಕೊಂಡು ತಮ್ಮ ವಕೀಲ ವೃತ್ತಿಯನ್ನು ಮತ್ತೆ ಆರಂಭಿಸಿದರು. ಇದೇ ವರ್ಷ ಇವರಗೆಳೆಯ ವೈದ್ಯನಾಥರು ಹುಚ್ಚುಹಿಡಿದು ತೀರಿಕೊಂಡರು. ೧೯೧೮ರ ಡಿಸೆಂಬರಿನಲ್ಲಿ ನಡೆದ ದಿಲ್ಲಿಯ ಕಾಂಗ್ರೆಸ್ ಅಧಿವೇಶನಕ್ಕೂ ರಾಜೇಂದ್ರರು ಹೋಗಿದ್ದರು. ಚಂಪಾರಣ್ಯದಲ್ಲಿನ ನೀಲಿಯ ದೊರೆಗಳ ವಿರುದ್ಧದ ಸತ್ಯಾಗ್ರಹ ಗಾಂಧೀಜಿಯವರ ನಾಯಕತ್ವದಲ್ಲಿ ನಡೆದುದರಿಂದ ಬಿಹಾರಿನ ಹೆಸರು ರಾಜಕೀಯದಲ್ಲಿ ಅಲ್ಲಲ್ಲಿ ಕೇಳಿಬರಲು ಆರಂಭವಾಯಿತು. ಆದರೂ ಬಿಹಾರಿನ ಪ್ರತಿನಿಧಿಗಳಿಗೆ ವಿಶೇಷ ಸ್ಥಾನವನ್ನು ದಿಲ್ಲಿಯ ಕಾಂಗ್ರೆಸ್ ಸಮ್ಮೇಳನದಲ್ಲಿ ಕೊಟ್ಟಿರಲಿಲ್ಲ. ಬಿಹಾರಿನ ಪ್ರತಿನಿಧಿಗಳು ಉಳಿದುಕೊಳ್ಳಲು ಕೂಡ ಯಾವ ಏರ್ಪಾಟು ಮಾಡಿರಲಿಲ್ಲ. ಆಗ ರಾಜೇಂದ್ರಪ್ರಸಾದರೂ ಮತ್ತುಳಿದ ಬಿಹಾರಿಗಳೂ ಸಿ ಆರ್. ದಾಸರಿಗಾಗಿ ಸಿದ್ಧವಾದ ಕೋಣೆಯನ್ನು ಆಕ್ರಮಿಸಿಬಿಟ್ಟರು. ಅವರ ಊಟಕ್ಕೆ ಏರ್ಪಾಟು ಮಾಡುವುದಿಲ್ಲವೆಂದು ಸ್ವಾಗತಸಮಿತಿಯವರು ಹೆದರಿಸಲು ತಾವೇ ಅಡಿಗೆ ಮಾಡಿಕೊಳ್ಳುವುದನ್ನು ಆರಂಭಿಸಿದರು.



೬

# ಅಸಹಕಾರ ಚಳುವಳಿ ಮತ್ತು ಅನಂತರ

೧೯೧೮ರಲ್ಲಿ ಮೊದಲನೆಯ ಮಹಾಯುದ್ಧ ಮುಕ್ತಾಯವಾಯಿತು. ಯುದ್ಧಕಾಲದಲ್ಲಿ ಭಾರತದಿಂದ ಬ್ರಿಟಿಷ್ ಸರ್ಕಾರಕ್ಕೆ ಬಹಳ ಸಹಾಯವಾಯಿತು. ಯುದ್ಧಕಾಲದಲ್ಲಿ ಬ್ರಿಟಿಷ್ ಸರ್ಕಾರ ಭಾರತದ ಮುಸ್ಲಿಮರಿಗೆ ಹಲವಾರು ವಚನಗಳನ್ನು ಕೊಟ್ಟಿತು. ಮುಸಲ್ಮಾನರ ಧಾರ್ಮಿಕಗುರು ತುರ್ಕಿಯ ಬಾದಷಹ-ಖಲೀಫ್. ತುರ್ಕಿಯ ಖಲೀಫರು ಜರ್ಮನಿಯಪರವಾಗಿ ಇಂಗ್ಲೆಂಡಿನ ವಿರುದ್ಧ ಯುದ್ಧದಲ್ಲಿ ಸೇರಿದುದರಿಂದ ಭಾರತದ ಮುಸಲ್ಮಾನರಿಗೆ ಉಭಯ ಸಂಕಟವೊದಗಿತು. ಸೈನ್ಯದಲ್ಲಿ ಸೇರಿದವರು ತುರ್ಕಿಯ ವಿರುದ್ಧ ಎಂದರೆ ತಮ್ಮ ಧರ್ಮ ಗುರುವಿನ ವಿರೋಧವಾಗಿ ಯುದ್ಧ ಮಾಡಬೇಕಾಗುತ್ತಿತ್ತು. ಅದಕ್ಕೆ ಅವರು ಸಿದ್ಧರಾಗಿರಲಿಲ್ಲ. ಅಲ್ಲದೆ ಯುದ್ಧದ ನಂತರ ಖಲೀಫರನ್ನು ಬ್ರಿಟಿಷ್ ಸರ್ಕಾರದವರು ಏನುಮಾಡಿಬಿಡುವರೋ ಎಂದು ಹೆದರಿಕೆಯಿತ್ತು. ಅದರಿಂದ ಅವರನ್ನು ಸಮಾಧಾನಗೊಳಿಸಲು ಬ್ರಿಟಿಷ್ ಸರ್ಕಾರದವರು ತುರ್ಕಿಯ ಅಧಿಕಾರಕ್ಕೂ, ಖಲೀಫರಿಗೂ ಯಾವಬಗೆಯ ನಷ್ಟವನ್ನೂ ಮಾಡುವುದಿಲ್ಲವೆಂದು ಘೋಷಿಸಿದರು. ಆದರೆ ಬ್ರಿಟಿಷ್ ಸರ್ಕಾರದ ನೀತಿ ಯಾವಾಗಲೂ ಬಾಯಿಯಲ್ಲೊಂದು, ಕೈಯಲ್ಲೊಂದು. ಖಲೀಫರ ಪ್ರಶ್ನೆಯಲ್ಲಿಯೂ ಹೀಗೆಯೇ ಆಯಿತು. ಇದರಿಂದ ಭಾರತದ ಮುಸಲ್ಮಾನರೆಲ್ಲರಿಗೂ ಅಸಮಾಧಾನವಾಯಿತು.

ಇದೂ ಅಲ್ಲದೆ ಬ್ರಿಟಿಷ್ ಸರ್ಕಾರ ತನ್ನ ಎರಡು ಮುಖದ ನೀತಿಯನ್ನೂ ಮತ್ತು ಒಂದು ರೀತಿಯಲ್ಲಿ ತೋರಿಸಲಾರಂಭಿಸಿತು. ೧೯೧೮ರ ಆರಂಭದಲ್ಲಿ ಮಾಂಟೆಗ್ಯೂ ಚೆಲ್ಮ್ಸ್‌ಫರ್ಡ್ ಸುಧಾರಣೆಗಳ ಯೋಜನೆಯನ್ನು ಘೋಷಿಸಿದ ಸರ್ಕಾರ ೧೯೧೮ರ ಕೊನೆಯಲ್ಲಿ ರೌಲಟ್ ಯೋಜನೆಯನ್ನು ಪ್ರಕಟಿಸಿತು. ಭಾರತದಲ್ಲಿ ಜನತೆಯ ಅಸಮಾ

ಥಾನವನ್ನು ಪರಿಹರಿಸುವ ಶಾಂತಿಯುತರೀತಿಯನ್ನನುಸರಿಸುವ ಬದಲು, ಅವರನ್ನು ತುಳಿಯುವ ಯೋಚನೆ ನಡೆಸಿತು. ಯುದ್ಧ ನಡೆಯುತ್ತಿರುವ ಕಾಲದಲ್ಲಿ 'ಯುದ್ಧಕಾನೂನು' 'ಭಾರತರಕ್ಷಣಾ ಮಸೂದೆ' ಜಾರಿಯಲ್ಲಿತ್ತು. ಇದರಂತೆ ಯಾರನ್ನಾದರೂ, ಯಾವ ಸಮಯದಲ್ಲಾದರೂ ಸೆರೆಗೆ ಹಾಕಬಹುದಾಗಿತ್ತು. ಹೀಗೆ ಸೆರೆಯಾದವರು ನ್ಯಾಯಾಲಯದಲ್ಲಿ ತಮ್ಮ ಪರವಾಗಿ ವಾದ ಹೂಡುವಂತೆಯೂ ಇರಲಿಲ್ಲ. ಯುದ್ಧ ನಡೆಯುತ್ತಿರುವ ಕಾಲದಲ್ಲಿ ಯುದ್ಧ ವಿರೋಧಿ ಚಳುವಳಿ ನಡೆದರೆ ಅದನ್ನು ಅಡಗಿಸಲು ಈ ಕಾನೂನು ಜಾರಿಯಾಗಿತ್ತು. ಯುದ್ಧ ಮುಗಿದ ಆರು ತಿಂಗಳಲ್ಲೇ ಈ ಕಾನೂನಿನ ಅವಧಿ ಮುಗಿಯುತ್ತಿತ್ತು. ಅದು ಮುಗಿಯುವ ಮೊದಲೇ ಅದರ ಎಲ್ಲಾ ಅಧಿಕಾರವನ್ನು ಕೂಡಿಸಿಕೊಂಡು, ಜನತೆಯನ್ನು ತುಳಿದಿಡುವ ರೀತಿಯನ್ನು ಸೂಚಿಸಲು ಬ್ರಿಟಿಷ್ ಸರ್ಕಾರ ಒಂದು ಸಮಿತಿಯನ್ನು ರಚಿಸಿತು. ಇದರ ಅಧ್ಯಕ್ಷರು ಲಂಡನ್ ಹೈಕೋರ್ಟಿನ ನ್ಯಾಯಾಧೀಶರಾಗಿದ್ದ ಸರ್ ಸಿಡ್ನಿರೌಲಟ್. ಈ ಸಮಿತಿಯ ಯೋಜನೆಯನ್ನೇ ರೌಲಟ್ ಯೋಜನೆಯೆಂದು ಪ್ರಕಟಿಸಿದ್ದರು. ಸರ್ಕಾರ ಮಾಂಟೆಗ್ಯೂ ಸುಧಾರಣೆಯಪ್ರಕಾರ ಭಾರತಕ್ಕೆ ಹೆಜ್ಜೆಹೆಜ್ಜೆಯಾಗಿ ಸ್ವಾತಂತ್ರ್ಯದ ಆಸೆ ತೋರಿ, ರೌಲಟ್ ಕಾನೂನಿನಂತೆ ಜನರ ಸ್ವಾತಂತ್ರ್ಯ ಚಳುವಳಿಯನ್ನು ನಾಶಗೊಳಿಸುವ ಯೋಜನೆ ಕೈಗೊಂಡಿತು. ಯುದ್ಧಕಾಲದಲ್ಲಿ ಭಾರತಕ್ಕೆ ಕೊಟ್ಟ ವಾಗ್ದಾನವೆಲ್ಲಾ ನೀರುಪಾಲಾಯಿತು !

ಖಿಲಾಫತ್ ಮತ್ತು ರೌಲಟ್‌ಬಿಲ್ಲಿನ ವಿರೋಧವಾಗಿ ಜನರಲ್ಲಿ ಅಸಮಾಧಾನ ಜ್ವಾಲಾಮುಖಿಯಾಯಿತು ! ಒಂದು ದೊಡ್ಡ ಆಂದೋಲನವಾಯಿತು. ಈ ಆಂದೋಲನದ ನಾಯಕತ್ವವನ್ನು ಗಾಂಧೀಜಿಯವರು ವಹಿಸಿದರು.

ರಾಜೇಂದ್ರಬಾಬು ದಿಲ್ಲಿಯ ಕಾಂಗ್ರೆಸ್ ಅಧಿವೇಶನದಿಂದ ಪಾಟ್ನಾಕ್ಕೆ ಹಿಂತಿರುಗಿ ಎಂದಿನಂತೆ ವಕೀಲಿಯ ಕೆಲಸದಲ್ಲಿ ಮಗ್ನರಾಗಿದ್ದರು. ಚಂಪಾರಣ್ಯದಲ್ಲಿ ಗಾಂಧೀಜಿಯವರಿಂದ ಕಲಿತ ಸತ್ಯ, ಅಹಿಂಸೆಗಳ ಪಾಠವನ್ನು ಅವರು ಮರೆಯಲಿಲ್ಲ. ಸತ್ಯದ ಹಾದಿ ಹಿಡಿಯುವು

ದರಿಂದ ಎಂದಿಗೂ ಅಳಿಯದ ಹಿರಿಯ ಆಸ್ತಿ ಆತ್ಮದ ಉನ್ನತಿ, ಜನರ ವಿಶ್ವಾಸ, ಪ್ರೇಮ ದೊರಕುವುದೆಂದು ಗಾಂಧೀಜಿ ನುಡಿದಿದ್ದರು. ಅದು ರಾಜೇಂದ್ರಬಾಬುವಿನ ಹೃದಯದಲ್ಲಿ ನಟ್ಟಿತ್ತು. ಗಾಂಧೀಜಿ ಖೇಡಾ ಜಿಲ್ಲೆಯ ಸತ್ಯಾಗ್ರಹ ಮುಗಿಸಿದನಂತರ ಖಾಯಿಲೆ ಬಿದ್ದರು. ಮಾಂಟೆಗ್ಯೂ ಸುಧಾರಣೆಯನ್ನು ಚರ್ಚಿಸಲು ಮುಂಬಯಿಯಲ್ಲಿ ಕಾಂಗ್ರೆಸ್ಸಿನ ಅಧಿವೇಶನ ನಡೆದಾಗ ಗಾಂಧೀಜಿ ಅಲ್ಲಿಗೆ ಬರಲಾಗಲಿಲ್ಲ. ರಾಜೇಂದ್ರಬಾಬು ಮುಂಬಯಿಯಿಂದ ಅಹಮದಾಬಾದಿಗೆ ಬಂದರು. ಗಾಂಧೀಜಿ ಮುಜಫರ್‌ಪುರದಲ್ಲಿ ಸೇಟ್ ಅಂಬಲಾಲ್ ಸಾರಾಭಾಯಿಯವರ ದೊಡ್ಡ ಭವನದಲ್ಲಿ ಇಳಿದುಕೊಂಡಿದ್ದರು. ಒಂದು ದಿನ ಜ್ವರ ವಿಪರೀತ ಏರಿತು. ವೈದ್ಯರಿಗೆ ಗಾಬರಿಯಾಗಿತ್ತು. ಗಾಂಧೀಜಿ ಇನ್ನಿಲ್ಲಿರಲಾರೆನೆಂದು ತೀರ್ಮಾನಿಸಿಬಿಟ್ಟರು. ಯಾರೆಷ್ಟು ಹೇಳಿದರೂ ಕೇಳದೆ ತಮ್ಮ ಸಬರ್ಮತಿ ಆಶ್ರಮಕ್ಕೆ ಹೊರಟುಹೋದರು. ಅದೇ ದಿನ ರಾಜೇಂದ್ರರು ಅಹಮದಾಬಾದಿಗೆ ಬಂದವರು ಈ ಸುದ್ಧಿ ಕೇಳಿ ಸಬರ್ಮತಿಗೆ ಬಂದರು. ಅಲ್ಲಿನ ದೃಶ್ಯ ಅವರನ್ನು ಗಾಂಧೀಜಿಯವರ ಬಳಿಗೆ ಇನ್ನೂ ಸೆಳೆಯಿತು. ಗಾಂಧೀಜಿಗೆ ಜ್ವರತಗ್ಗಿತ್ತು; ನಿಶ್ಯಕ್ತಿ ಹಾಗೆಯೇ ಉಳಿದಿತ್ತು. "ನಿನ್ನೆ ಬಹಳ ಜ್ವರ ಬಂದಾಗ ನಾನು ಹಟ ಮಾಡಿ ಇಲ್ಲಿಗೆ ಬಂದುಬಿಟ್ಟೆ. ಇಲ್ಲಿಗೆ ಬಂದಮೇಲೆಯೇ ನನ್ನ ಜ್ವರ ತಗ್ಗುವುದೆಂದು ನನಗೆ ತಿಳಿದಿತ್ತು. ಆ ದೊಡ್ಡ ಭವನದಲ್ಲಿ ನನ್ನ ಹೃದಯದಲ್ಲೊಂದು ದೊಡ್ಡ ಜ್ವಾಲೆಯೆದ್ದಂತಿತ್ತು! "ಗಾಂಧೀ, ನೀನು ಇಲ್ಲಿ ಇಂತಹ ದೊಡ್ಡ ಭವನದಲ್ಲಿ ಯಾಕಿರುವೆ? ನಿನ್ನ ಜಾಗ ಬಡವರ ಗುಡಿಸಲಿನಲ್ಲಿ, ಆಶ್ರಮದಲ್ಲಿ, ಅಲ್ಲಿಗೆ ಹೊರಡುವತನಕ ನಿನಗೆ ಶಾಂತಿಯಿಲ್ಲ'' ಎಂದು ನನಗನಿಸಿತು. ಅದಕ್ಕಾಗಿ ಹೊರಟುಬಂದೆ" ಎಂದು ಗಾಂಧೀಜಿ ಹೇಳಿದರು. ಈ ಕಾಯಿಲೆಯಿಂದ ಗುಣವಾಗಿ ಎದ್ದೊಡನೆಯೇ ಗಾಂಧೀಜಿ ರೌಲಟ್ ಕಾನೂನಿನ ವಿರುದ್ಧ ಚಳುವಳಿಯನ್ನಾರಂಭಿಸಿದರು. ಈ ರೌಲಟ್ ಮಸೂದೆಯಪ್ರಕಾರ ಸರ್ಕಾರ ಎರಡು ಕಾನೂನನ್ನು ರಚಿಸಿತು. ಅದರಂತೆ ಸರ್ಕಾರಕ್ಕೆ ಯಾರನ್ನಾದರೂ ಕಾರಣವನ್ನೇಕೊಡದೆ, ನ್ಯಾಯಾಲಯಕ್ಕೂ ತರದೆ, ಮನಸ್ಸು

ಬಂದಷ್ಟು ದಿನ ಸೆರೆಯಲ್ಲಿಡುವ ಅಧಿಕಾರ ಬಂತು. ಯುದ್ಧಕಾಲದಲ್ಲಿ ಕೊಟ್ಟ ವಾಗ್ದಾನಗಳು ಗಾಳಿಪಾಲಾದುದಷ್ಟೇ ಅಲ್ಲದೆ, ಈ "ಕಪ್ಪು ಕಾನೂನನ್ನು" ಭಾರತದ ಮೇಲೆ ಹೇರಿಸಿದ ಸರ್ಕಾರದ ಬಗ್ಗೆ ಭಾರತದಲ್ಲೆಲ್ಲಾ ವಿರೋಧವೆದ್ದಿತು. ಎಲ್ಲೆಲ್ಲೂ ಸಭೆಗಳಾದುವು. ಗಾಂಧೀಜಿ ಸರ್ಕಾರದ ವಿರುದ್ಧ ಅಹಿಂಸಾತ್ಮಕ ಸತ್ಯಾಗ್ರಹವನ್ನು ಘೋಷಿಸಿದರು.

ಏಪ್ರಿಲ್ ೬ ನೆಯ ತಾರೀಕು ಸತ್ಯಾಗ್ರಹ ದಿನವೆಂದು ಗಾಂಧೀಜಿ ಸಾರಿದರು. ಆ ದಿನ ದೇಶದಲ್ಲೆಲ್ಲಾ, ಜನರು ಉಪವಾಸ ಮಾಡಬೇಕು ಮಂದಿರಗಳಲ್ಲಿ, ಮಸೀದಿಗಳಲ್ಲಿ ಪ್ರಾರ್ಥನೆ ನಡೆಸಿ, ಸಂಜೆ ಸಭೆ ಸೇರಿ ಈ "ಕಪ್ಪು ಕಾನೂನನ್ನು" ವಿರೋಧಿಸಬೇಕು ಎಂದು ಗಾಂಧೀಜಿ ಸೂಚಿಸಿದರು. ಅಂದಿನ ರೀತಿಯ ಹರತಾಳ ಆತನಕ ಆಗಿರಲಿಲ್ಲ. ಪಟ್ಟಣಗಳಲ್ಲಿ ಅಂಗಡಿಗಳೆಲ್ಲ ಮುಚ್ಚಿದ್ದುವು; ವಾಹನಗಳು ನಿಂತುವು ಗಾಂಧೀಜಿಯ ಈ ಸಂದೇಶ ಹಳ್ಳಿಗಳಿಗೆ ಹೇಗೆ ಮುಟ್ಟಿತೋ ! ಹಳ್ಳಿಗಳಲ್ಲಿ ಆ ದಿನ ರೈತರು ಎತ್ತಿನ ಗಾಡಿ ಕೂಡ ಕಟ್ಟಲಿಲ್ಲ. ಇಂತಹ ಹರತಾಳ ಇದೇ ಮೊದಲು ! ರಾಜೇಂದ್ರಪ್ರಸಾದರು ಪಾಟ್ನಾದಲ್ಲಿ ಈ ಸತ್ಯಾಗ್ರಹದ ಸಿದ್ಧತೆಗಳನ್ನು ತತ್ಪರತೆಯಿಂದ ಮಾಡಿದರು. ಅಸಹಕಾರ ಚಳವಳಿಗೆ ಮಜಹರುಲ್‌ಹಕ್ ಮತ್ತು ಹಸನ್ ಇಮಾಮ್ ಮುಂತಾದ ಬಿಹಾರಿನ ಮುಸ್ಲಿಂನಾಯಕರೂ ನೆರವಾದರು. ಆಗ ಹರತಾಳ ನಡೆಸಬೇಕೆಂದು ಎಲ್ಲಾ ಅಂಗಡಿಯ ಮಾಲಿಕರಿಗೂ ಹೇಳಿಯಾಗಿತ್ತು. ಎಲ್ಲರೂ ತಮ್ಮ ಅಂಗಡಿಯನ್ನು ಮುಚ್ಚುವುದಾಗಿ ಭರವಸೆಕೊಟ್ಟರು. ಆದರೆ ಒಬ್ಬ ದೊಡ್ಡ ಅಂಗಡಿಯ ಮಾಲೀಕರು ಒಪ್ಪಿಗೆ ಕೊಡಲಿಲ್ಲ. ಎಷ್ಟೇ ಹೇಳಿದರೂ ಕೇಳಲಿಲ್ಲ. ಅವರ ಈ ವರ್ತನೆ ಹಸನ್ ಇಮಾಮರಿಗೆ ತಿಳಿಯಿತು. ಕೂಡಲೇ ರಾಜೇಂದ್ರಪ್ರಸಾದರೊಂದಿಗೆ ಆತನ ಅಂಗಡಿಗೆ ಹೋದರು. ಅಂಗಡಿಯೊಳಹೊಕ್ಕು ತಮ್ಮ ತಲೆಯ ಟೋಪಿಯನ್ನು ತೆಗೆದು ಅಂಗಡಿಯ ಮಾಲಿಕರ ಕಾಲಿನ ಮೇಲಿಟ್ಟುಬಿಟ್ಟರು. ಆತ ಹಾವು ಕಚ್ಚಿದವನಂತೆ ಹಿಮ್ಮೆಟ್ಟಿದ. ತಾವು ಹೇಳಿಕಳಿಸಿದ್ದರೇ ಸಾಕಿತ್ತು, ಹೀಗೆ ಮಾಡಬಾರದಾಗಿತ್ತೆಂದು ಇಮಾಮರಲ್ಲಿ ಕ್ಷಮೆ

ಬೇಡಿದ. ಅಂತೂ ಸತ್ಯಾಗ್ರಹದ ದಿನ ಎಲ್ಲಾ ಅಂಗಡಿಗಳೂ ಮುಚ್ಚಿದುವು. ಸಂಜೆ ಅದ್ಭುತವಾದ ಮೆರವಣಿಗೆ ಸಭೆಗಳು ನಡೆದುವು.

ಗಾಂಧೀಜಿಯವರು ಸತ್ಯಾಗ್ರಹದ ಆರಂಭದಲ್ಲೇ ಒಂದು ಷರತ್ತು ಹಾಕಿದ್ದರು. ಸತ್ಯಾಗ್ರಹದಲ್ಲಿ ಭಾಗವಹಿಸುವವರು ತಾವು ಸಂಪೂರ್ಣವಾಗಿ ಅಹಿಂಸಾತ್ಮಕ ರೀತಿಯಲ್ಲಿ ಸರ್ಕಾರದ ಕಾನೂನುಗಳನ್ನು ಭಂಗಮಾಡುತ್ತೇವೆಂದೂ, ಅದಕ್ಕಾಗಿ ತಮಗಾಗುವ ಶಿಕ್ಷೆಯನ್ನು ಸಂತೋಷದಿಂದ ಅನುಭವಿಸುವೆವೆಂದೂ ಪ್ರತಿಜ್ಞೆ ಮಾಡಬೇಕಾಗಿತ್ತು. ಇದನ್ನು ಅವರು ಬರಹದಲ್ಲಿ ಕೊಡಬೇಕಿತ್ತು. ಈ ಷರತ್ತನ್ನು ಪತ್ರಿಕೆಗಳವರೂ, ಹಲವು ಕಾಂಗ್ರೆಸ್ ನಾಯಕರೂ ಟೀಕಿಸಿದರೂ ಗಾಂಧೀಜಿ ಬಗ್ಗಲಿಲ್ಲ. ಈ ಸತ್ಯಾಗ್ರಹದ ಅಂಗವಾಗಿ ಎಲ್ಲೆಲ್ಲೂ ಸಭೆಗಳೂ, ಮೆರವಣಿಗೆಗಳೂ ನಡೆದುವು. ಇದರ ಫಲವಾಗಿ ಹಲವಾರು ಕಡೆ ಗುಂಡಿನೇಟು ಕೂಡ ಬಿತ್ತು. ಆದರೆ ಹಿಂದೂ ಮುಸ್ಲಿಂ ಐಕ್ಯ ಬಹಳ ಚೆನ್ನಾಗಿ ಸಾಧಿಸಲ್ಪಟ್ಟಿತ್ತು. ಜತೆಜತೆಯಾಗಿಯೇ ಮೆರವಣಿಗೆಯಲ್ಲಿ ಸಭೆಗಳಲ್ಲಿ ಭಾಗವಹಿಸಿದರು. ಒಂದಿಗೇ ಪೋಲೀಸರ ಗುಂಡಿನೇಟಿಗೆ ತುತ್ತಾದರು. ಮುಸಲ್ಮಾನರಿಗೆ ಹಿಂದೂ ಸೋದರರಲ್ಲಿ ಎಂತಹ ಪ್ರೇಮವೆಂದರೆ ಸ್ವಾಮಿ ಶ್ರದ್ಧಾನಂದರನ್ನು ಮೆರವಣಿಗೆಯಲ್ಲಿ ಕರೆದೊಯ್ದು ತಮ್ಮ ಮಸೀದಿಯಲ್ಲಿ ಅವರಿಂದ ಭಾಷಣ ಮಾಡಿಸಿದರು. ಈ ನಡುವೆ ಸತ್ಯಾಗ್ರಹ ನಡೆದ ಕಡೆಗಳಲ್ಲಿ ಅಲ್ಲಿಂದ ಇಲ್ಲಿಂದ ಕೋಲಾಹಲ, ಗಲಾಟೆಗಳ ಸುದ್ದಿ ಬರಲಾರಂಭವಾಯಿತು. ದಿಲ್ಲಿಯಲ್ಲಿ ಕೊಂಚ ಅಶಾಂತಿ ತಲೆದೋರಲು ಅದನ್ನು ಹದಗೊಳಿಸಲು ಗಾಂಧೀಜಿ ಮುಂಬಯಿಯಿಂದ ದಿಲ್ಲಿಗೆ ಹೊರಟರು. ಆದರೆ ದಾರಿಯಲ್ಲೇ ಅವರನ್ನು ಬಂಧಿಸಿ ಮುಂಬಯಿಗೆ ತಂದು ಬಿಡುಗಡೆಮಾಡಿದರು. ಈ ಕಾಲದಲ್ಲೇ ಜಲಿಯನ್ ವಾಲಾಬಾಗಿನ ಹತ್ಯಕಾಂಡ ನಡೆದುದು. ನಿಶ್ಶಸ್ತ್ರರಾದ ಹೆಂಗಸರು ಮಕ್ಕಳನ್ನು ಜಲಿಯನ್ ವಾಲಾಬಾಗಿನಲ್ಲಿ ಜನರಲ್ ಓಡ್ವೈಯರ್ ಮಿಷನ್ ಗನ್ನಿನ ಗುಂಡಿಗೆ ಗುರಿ ಮಾಡಿದ ಘೋರ ಹತ್ಯೆಯ ಸುದ್ದಿ ಕೇಳಿ ಜನ ರೋಷಗೊಂಡರು. ಪಂಜಾಬಿನಲ್ಲಿ ಯುದ್ಧ ಕಾನೂನು ಜಾರಿ ಮಾಡಿದರು. ಅಲ್ಲಿಂದ ಸುದ್ದಿ ಹೊರಕ್ಕೆ ಬರುವುದೇ

ಬಹಳ ಕಷ್ಟವಾಗಿತ್ತು. ಹೇಗೋ ಅಲ್ಲೊಂದು ಇಲ್ಲೊಂದು ಸುದ್ದಿ ಹೊರಕ್ಕೆ ತಿಳಿಯುತ್ತಿತ್ತು. ಅದೂ ಬಹಳ ದಿನಗಳಾದ ನಂತರ ತಿಳಿಯುತ್ತಿತ್ತು. ಕಾಗದಗಳನ್ನು ಕೂಡ ಪಂಜಾಬಿನ ಹೊರಗಿನವರಿಗೆ ಬರೆಯುವಂತಿರಲಿಲ್ಲ! ಗಾಂಧೀಜಿ ದೇಶದ ನಾಡಿ ನೋಡಿದರು. ಜನ ರೋಷದಲ್ಲಿ ಬೆಂಕಿಯ ಬೆಟ್ಟಗಳಾಗಿದ್ದರು. ಹೀಗಾದರೆ ಅಹಿಂಸೆಯ ಪಾಲನೆ ನಡೆಯುವಂತೆಯೇ ಇಲ್ಲವೆಂದು ಗಾಂಧೀಜಿಗೆ ಖಚಿತವಾಗಿ ಹೋಯಿತು. ಕೂಡಲೇ ಸತ್ಯಾಗ್ರಹವನ್ನು ತಾತ್ಕಾಲಿಕವಾಗಿ ನಿಲ್ಲಿಸಿದರು. ಜನತೆ ಅಹಿಂಸಾತ್ಮಕ ಸತ್ಯಾಗ್ರಹಕ್ಕೆ ಇನ್ನೂ ಸಿದ್ಧವಾಗಿಲ್ಲವೆಂದು ಗಾಂಧೀಜಿಗೆ ಅನಿಸಿತು.

ಪಂಜಾಬಿನಲ್ಲಿ ನಡೆದ ಘಟನೆಗಳನ್ನು ಚರ್ಚಿಸಲು, ವಿಚಾರಿಸಲು ಕಾಂಗ್ರೆಸ್ ಒಂದು ಸಮಿತಿಯನ್ನು ರಚಿಸಿತು. ಗಾಂಧೀಜಿ, ಜಯಕರ್ ಅಬ್ಬಾಸ್ ತ್ಯಾಬ್ಜೀ ಮುಂತಾದವರೆಲ್ಲಾ ಹಳ್ಳಿಹಳ್ಳಿ ಸುತ್ತಿ ವಿಷಯ ಸಂಗ್ರಹ ಮಾಡಿದರು. ಸರ್ಕಾರದವರು ರಚಿಸಿದ್ದ ಸಮಿತಿಯ ವರದಿಯೂ, ಕಾಂಗ್ರೆಸ್ಸಿನ ವರದಿಯೂ ೧೯೨೦ ರಲ್ಲಿಯೇ ಪ್ರಕಟವಾದುವು. ಖಿಲಾಫತಿನ ವಿಷಯವಾಗಿ ಮುಸಲ್ಮಾನರಲ್ಲಿ ಕೋಲಾಹಲವಾಗಿತ್ತು. ಮೌಲಾನಾಮುಹಮುದ್ ಅಲಿ, ಶೌಕತ್ ಆಲಿ, ಅಬುಲ್‌ಕಲಾಮ್ ಆಜಾದ್ ಮುಂತಾದ ಮುಸ್ಲಿಂನಾಯಕರೆಲ್ಲ ಸೆರೆಗೆ ಹಾಕಲ್ಪಟ್ಟಿದ್ದರು. ಅವರು ಈಗ ಬಿಡುಗಡೆಯಾದರು. ಅವರು ದೇಶದಲ್ಲೆಲ್ಲಾ ಖಿಲಾಫತ್ ಸಮಿತಿಗಳನ್ನು ಸ್ಥಾಪಿಸಿದ್ದರು. ಆದರೆ ಸರ್ಕಾರದ ವಿರುದ್ಧವಾಗಿ ಏನು ಕಾರ್ಯಕ್ರಮ ಕೈಗೊಳ್ಳಬೇಕೆಂದು ಅವರಿಗೆ ಖಚಿತವಾಗಿ ತಿಳಿದಿರಲಿಲ್ಲ. ರೌಲಟ್ ಕಾನೂನು, ಪಂಜಾಬ್ ಹತ್ಯಕಾಂಡ ಮತ್ತು ಖಿಲಾಫತ್ ಇವೆಲ್ಲದರ ಕಾರಣದಿಂದ ಕಾಂಗ್ರೆಸ್ ಸಮಿತಿಗಳೂ ಜತೆಯಾದುವು. ಆಲಿ ಸಹೋದರರು ಗಾಂಧೀಜಿಯವರಲ್ಲಿ ಬಹಳ ಭಕ್ತಿಯಿಟ್ಟಿದ್ದರು. ಗಾಂಧೀಜಿ ಖಿಲಾಫತ್‌ಸಮಿತಿಯ ಸದಸ್ಯರಾಗಿದ್ದರು. ೧೯೨೦ರಲ್ಲಿ ಖಿಲಾಫತ್ ಸಮಿತಿಯೂ ಅಹಿಂಸಾತ್ಮಕ ಅಸಹಕಾರವನ್ನು ಒಪ್ಪಿತು. ಏನುಮಾಡಬೇಕೆಂದು ಚರ್ಚೆ ನಡೆಸಲು ಲಾಲಾಲಜಪತರಾಯರ ಅಧ್ಯಕ್ಷತೆಯಲ್ಲಿ ಕಲ್ಕತ್ತೆಯಲ್ಲಿ

ಕಾಂಗ್ರೆಸ್ಸಿನ ವಿಶೇಷ ಅಧಿವೇಶನ ನಡೆಸಲು ತೀರ್ಮಾನವಾಯಿತು.

೧೯೨೦ರ ಏಪ್ರಿಲಿನಲ್ಲಿ ಪಾಟ್ನಾದಲ್ಲಿ ನಡೆದ ಸಭೆಯಲ್ಲಿ ಮೌಲಾನಾ ಶೌಕತ್ ಆಲಿಯವರು ಅಹಿಂಸಾತ್ಮಕ ಅಸಹಕಾರದ ಬಗ್ಗೆ ಮಾತನಾಡಿ ಇದಕ್ಕೆ ಯಾರು ಸಿದ್ಧರಾಗಿರುವರೆಂದು ಕೇಳಿದಾಗ ಮೊದಲೆದ್ದು ನಿಂತವರು ರಾಜೇಂದ್ರಬಾಬು. ಅಸಹಕಾರದಲ್ಲಿ ಸೇರಿದವರು ವಕೀಲಿಯನ್ನು ಬಿಡಬೇಕು, ಸರ್ಕಾರೀ ಕೌನ್ಸಿಲ್ಲುಗಳಿಗೆ ಸದಸ್ಯರಾಗಕೂಡದೆಂದೂ ಷರತ್ತಿತ್ತು. ಮಾಂಟೆಗ್ಯೂ ಸುಧಾರಣೆಯ ಅನುಸಾರ ನವೆಂಬರಿನಲ್ಲಿ ನಡೆಯುವ ಚುನಾವಣೆಗಳಲ್ಲಿ ನ್ಯಾಯಾಂಗ ಸಭೆಗೆ ತಾವೂ ಸದಸ್ಯತ್ವಕ್ಕೆ ನಿಲ್ಲಬೇಕೆಂದು ರಾಜೇಂದ್ರಬಾಬು ಯೋಚಿಸಿದ್ದರು. ಈಗ ಸಭೆಯಲ್ಲಿ ತಾವು ಅಸಹಕಾರದಲ್ಲಿ ಸೇರುವ ಘೋಷಣೆ ಮಾಡುತ್ತಾ ಆ ಎರಡೂ ಯೋಚನೆಗಳನ್ನು ತಾವು ಬಿಡುವುದಾಗಿ ರಾಜೇಂದ್ರಬಾಬು ಹೇಳಿದರು. ಈ ಸಭೆ ರಾಜೇಂದ್ರಬಾಬುವನ್ನು ಇದ್ದುದಿದ್ದಂತೆ ಅಸಹಕಾರ ಚಳುವಳಿಯಲ್ಲಿ ದೂಡಿತು! ಬಿಹಾರ್ ಪ್ರಾಂತೀಯ ಸಮ್ಮೇಲನಕ್ಕೆ ರಾಜೇಂದ್ರಬಾಬು ಆ ವರ್ಷ ಅಧ್ಯಕ್ಷರಾಗಿ ಚುನಾಯಿತರಾದರು. ಅಲ್ಲಿ ಅಸಹಕಾರದ ಪರವಾದ ಪಕ್ಷವೂ ಇತ್ತು. ವಿರೋಧಪಕ್ಷವೂ ಇತ್ತು. ಸಮ್ಮೇಲನ ತಮ್ಮನ್ನು ಅಧ್ಯಕ್ಷರನ್ನಾಗಿ ಚುನಾಯಿಸಿದರೂ ತಮ್ಮ ಅಸಹಕಾರದ ವಿಚಾರವನ್ನು ತಿರಸ್ಕರಿಸಬಹುದೆಂಬ ಹೆದರಿಕೆ ರಾಜೇಂದ್ರಬಾಬುಗಿತ್ತು. ಭಾಗಲ್ಪುರದಲ್ಲಿ ನಡೆದ ಈ ಸಮ್ಮೇಲನದಲ್ಲಿ ರಾಜೇಂದ್ರಬಾಬು ಹಿಂದಿಯಲ್ಲಿಯೇ ಅಧ್ಯಕ್ಷಭಾಷಣಮಾಡಿದರು. ಈ ತನಕ ಇಂಗ್ಲೀಷಿನಲ್ಲಿಯೇ ಆಗುತ್ತಿದ್ದ ಭಾಷಣ ಇದೇ ಮೊದಲು ಹಿಂದಿಯಲ್ಲಾದುದು! ಸಮ್ಮೇಲನ ಅಸಹಕಾರ ಚಳುವಳಿಯನ್ನೊಪ್ಪಿ ಬಿಹಾರಿನಲ್ಲಿ ಕಾರ್ಯಕ್ರಮ ತಯಾರಿಸಲು ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯಲ್ಲಿ ಇನ್ನೊಂದು ವಿಶೇಷ ನಡೆಯಿತು. ಈ ತನಕ ನಡೆದ ಸಭೆಗಳಲ್ಲೆಲ್ಲ ಅಸಹಕಾರದ ಕಾರಣ ಖಿಲಾಫತ್ ಮತ್ತು ಪಂಜಾಬ್ ಹತ್ಯಕಾಂಡವೆಂದೇ ಸೂಚಿತವಾಗಿದ್ದುವು. ಆದರೆ ಬಿಹಾರಿನ ಸಮ್ಮೇಲನದಲ್ಲಿ 'ಸ್ವರಾಜ್ಯ'ವನ್ನು ಈ ಕಾರಣ

ಗಳಲ್ಲಿ ಸೇರಿಸಿತು! ಮೊತ್ತಮೊದಲು ಇದನ್ನು ಅಸಹಕಾರ ಚಳು ವಳಿಗೆ ತಂದ ಶ್ರೇಯಸ್ಸು ಬಿಹಾರ್ ಪ್ರಾಂತ್ಯಕ್ಕೆ ಸೇರಿದುದು! ಇದರಿಂದ ಗಾಂಧೀಜಿಗೆ ಬಹಳ ಸಂತೋಷವಾಯಿತು. ಸಮ್ಮೇಲನ ಆರಂಭವಾಗುವ ಮೊದಲೇ ಅಸಹಕಾರವನ್ನೊಪ್ಪಿಕೊಳ್ಳಿರೆಂದು ಅವರು ತಂತಿ ಕಳಿಸಿದ್ದರು! ರಾಜೇಂದ್ರಬಾಬುವಿನ ಮನೆಯಲ್ಲಿಯೇ ಪಾಟ್ನಾದ ವಕೀಲರ ಸಭೆ ನಡೆಯಿತು. ಎಲ್ಲರೂ ತಮ್ಮ ವಕೀಲಿ ವೃತ್ತಿಯನ್ನು ಬಿಡಬೇಕು. ಎಂದರೆ ಹೊಸದಾಗಿ ಯಾವ ಮೊಕದ್ದಮೆ ಗಳನ್ನೂ ತೆಗೆದುಕೊಳ್ಳಕೂಡದು. ಹಳೆಯದರಲ್ಲಿ ಬಹಳ ಮುಖ್ಯ ವಾದುವುಗಳನ್ನು ಮಾತ್ರ ಕೊನೆಮುಟ್ಟಿಸಬೇಕೆಂದು ತೀರ್ಮಾನಿಸಿ ದರು. ರಾಜೇಂದ್ರರು ತಮ್ಮ ಹೆಚ್ಚು ಮೊಕದ್ದಮೆಗಳನ್ನು ತಮ್ಮ ಸ್ನೇಹಿತರಿಗೆ ವಹಿಸಿಕೊಟ್ಟರು. ಆವರ ಕಕ್ಷಿಗಾರರು ಇಷ್ಟಪಟ್ಟಾಗ ಅವರಿಂದ ತೆಗೆದುಕೊಂಡಿದ್ದ ಹಣವನ್ನು ಹಿಂದಕ್ಕೆ ಕೊಟ್ಟು ಮೊಕದ್ದ ಮೆಯನ್ನು ಹಿಂತೆಗೆದುಕೊಂಡರು. ಈ ವಕೀಲರ, ನಾಯಕರ ಸಭೆ ಯಲ್ಲಿ ನಡೆದ ಮತ್ತೊಂದು ಚರ್ಚೆ ಸರ್ಕಾರೀ ಶಾಲಾ ಕಾಲೇಜುಗಳಿಗೆ ಬಹಿಷ್ಕಾರಹಾಕುವ ವಿಷಯವಾಗಿ! ಇದು ಅಷ್ಟು ಫಲಕಾರಿಯಾಗ ಲಾರದು. ಸರ್ಕಾರದವರು ಹಿಂಸೆಗೆ ಗುರಿಪಡಿಸಬಹುದು. ಆಗ ವಿದ್ಯಾರ್ಥಿಗಳೂ, ಅವರ ಪೋಷಕರೂ ತಮ್ಮ ಕೈಬಿಟ್ಟು ಮತ್ತೆ ಸರ್ಕಾರೀ ಶಾಲೆ ಕಾಲೇಜುಗಳಿಗೇ ಹೋಗಿಬಿಡುವರೆಂದು ರಾಜೇಂದ್ರ ಬಾಬುವಿನ ಹೆದರಿಕೆ! ಆದರೆ ಈ ವಿಚಾರ ಬರಿಯ ಹೇಡಿತನದ್ದೆಂದು ಉಳಿದವರು ಹಾಸ್ಯಮಾಡಿಬಿಟ್ಟರು. ಅಲ್ಲದೆ ರಾಜೇಂದ್ರಬಾಬು ಇಲ್ಲದ ಹೆದರಿಕೆಯ ಭೂತ ಕಂಡು ಬೆದರಿರುವರೆಂದು ನಕ್ಕುಬಿಟ್ಟರು! ಚಂಪಾರಣ್ಯದ ಚಳುವಳಿ ಮುಗಿದಾಗಲೇ ಪೂನಾದ ಫರ್ಗ್ಯುಸನ್ ಕಾಲೇಜಿನ ರೀತಿಯದೊಂದು ಕಾಲೇಜನ್ನು, ರಾಷ್ಟ್ರೀಯ ವಿದ್ಯಾಲಯ ವನ್ನು ಬಿಹಾರಿನಲ್ಲಿ ಸ್ಥಾಪಿಸಬೇಕೆಂದು ಯೋಚನೆಮಾಡಿದ್ದರು. ಕೊಂಚ ಹಣವನ್ನು ಕೂಡಿಸಿದ್ದರು, ಆದರೆ ಅದನ್ನು ಈತನಕ ನಡೆಸಿ ರಲಿಲ್ಲ. ಈಗ ಆ ರೀತಿ ಏಕೆ ನಡೆಸಲಾಗದೆಂದು ಚರ್ಚೆ ಶುರು ವಾಯಿತು. ಈ ಚರ್ಚೆ ಹಲವಾರು ದಿನಗಳು ನಡೆಯಿತು. ಇನ್ನೂ

ಸ್ಥಾಪನೆಯ ಸಾಧ್ಯಾಸಾಧ್ಯತೆಯ ಬಗ್ಗೆ ವಿಚಾರ ನಡೆಯುತ್ತಿರು ವಾಗಲೇ ಮಜಹರುಲ್‌ಹಕ್‌ರವರು ರಾಷ್ಟ್ರೀಯ ವಿದ್ಯಾಲಯವನ್ನು ತೆರೆದೇಬಿಟ್ಟರು. ದೊಡ್ಡ ವಿಶ್ವವಿದ್ಯಾನಿಲಯಗಳಲ್ಲಿ ಪ್ರೊಫೆಸರ್ ಪದವಿಯಲ್ಲಿದ್ದವರು ಅಲ್ಲಿ ಬಿಟ್ಟು ಈ ವಿದ್ಯಾಲಯಕ್ಕೆ ಸೇರಿದರು. ರಾಜೇಂದ್ರ ಬಾಬು ತಮ್ಮ ಪ್ರತಿಜ್ಞೆಗನುಸಾರವಾಗಿ ಪಾಟ್ನಾ ವಿಶ್ವವಿದ್ಯಾನಿಲಯದ ಸೆನೇಟ್ ಮತ್ತು ಕೌನ್ಸಿಲ್‌ಗಳಿಗೆ ರಾಜೀನಾಮೆ ಕೊಟ್ಟರು.

ಗಾಂಧೀಜಿ ಈ ಕಾಲದಲ್ಲೇ ಬಿಹಾರಿನ ಯಾತ್ರೆಮಾಡಿದುದರಿಂದ ಎಲ್ಲರಿಗೂ ಉತ್ಸಾಹ ಉಕ್ಕಿತು. ಪಾಟ್ನಾದ ಇಂಜನಿಯರಿಂಗ್ ಕಾಲೇಜಿನ ವಿದ್ಯಾರ್ಥಿಗಳಿಗೂ ಕಾಲೇಜಿನ ಪ್ರಿನ್ಸಿಪಾಲರಿಗೂ ಯಾವದೋ ಮಾತಿಗೆ ಅಭಿಪ್ರಾಯಭೇದ ಬಂದಿತು. ವಿದ್ಯಾರ್ಥಿಗಳೆಲ್ಲಾ ಕಾಲೇಜು ಬಿಟ್ಟು ನೇರವಾಗಿ ಹಕ್ ಸಾಹೇಬರ ಬಳಿಗೆ ಬಂದರು. ಆಗ ಹಕ್‌ಸಾಹೇಬರು ಒಂದು ದೊಡ್ಡ ಬಂಗಲಿಯಲ್ಲಿದ್ದರು. ಬಹಳ ಭಾವುಕ ಮತ್ತು ನಿರ್ಭಯ ವೃತ್ತಿಯವರು, ಅವರು ತಮ್ಮ ಈ ಬಂಗಲಿಯನ್ನು ಬಿಟ್ಟು ಆ ವಿದ್ಯಾರ್ಥಿಗಳೊಂದಿಗೆ ಹತ್ತಿರದ ಒಂದು ತೋಟದಲ್ಲಿರಹತ್ತಿದರು. ಅಲ್ಲಿಯೇ ಕೆಲವು ಗುಡಿಸಲುಗಳನ್ನು ಹಾಕಿಕೊಂಡು ಸದಾಕತ್ ಆಶ್ರಮವನ್ನು ಸ್ಥಾಪಿಸಿದರು. ಚರಕಗಳನ್ನು ತಯಾರಿಸುವ ಕಾರ್ಖಾನೆಯನ್ನು ಸ್ಥಾಪಿಸಿದರು. ಹಕ್ ಸಾಹೇಬರು ಹುಡುಗರೊಂದಿಗೆ ತಾವೂ ಕೆಲಸಮಾಡುತ್ತಿದ್ದರು. ಅವರಿಗೆ ಪಾಠ ಹೇಳುತ್ತಿದ್ದರು. ಅವರ ಊಟವನ್ನೇ ತಾವೂ ಮಾಡುತ್ತಿದ್ದರು. ಅಲ್ಲಿನ ಹುಡುಗರೆಲ್ಲರೂ ಅವರನ್ನು ತಂದೆಯ ರೀತಿಯಲ್ಲಿ ಗೌರವಿಸುತ್ತಿದ್ದರು. ಒಬ್ಬ ಮುಸಲ್ಮಾನ ವಿದ್ಯಾರ್ಥಿ ಜಾತೀಯ ಮಾತಾಡಿದುದಕ್ಕೆ ಅವನನ್ನು ಅಲ್ಲಿಂದ ಹಕ್ ಸಾಹೇಬರೇ ಓಡಿಸಿಬಿಟ್ಟರು! ರಾಷ್ಟ್ರೀಯ ಮಹಾವಿದ್ಯಾಲಯವೂ ಆರಂಭವಾಯಿತು. ರಾಜೇಂದ್ರಬಾಬು ಅದರ ಪ್ರಿನ್ಸಿಪಾಲರಾದರು. ಗಾಂಧೀಜಿಯವರು ಮತ್ತೊಮ್ಮೆ ಬಿಹಾರಯಾತ್ರೆಗೆ ಬಂದಾಗ ೫೦–೬೦ ಸಾವಿರ ರೂಪಾಯಿಗಳನ್ನು ಕೊಟ್ಟರು. ಅಲ್ಲಿ ಬಿಹಾರ ವಿದ್ಯಾಪೀಠ ಸ್ಥಾಪಿತವಾಯಿತು. ಸರ್ಕಾರೀ ಕಾಲೇಜುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳು ಬಹಳಮಂದಿ

ಇಲ್ಲಿಗೆ ಬಂದರು. ಆದರೆ ಕೆಲವರು ಮಾತ್ರ ಇಲ್ಲಿಯೇ ಉಳಿದು ಕೊಂಡರು. ಚಳುವಳಿಯ ಕಾವಿಳಿದೊಡನೆಯೇ ಬಹಳಮಂದಿ ಮತ್ತೆ ಹಳೆಯ ಕಾಲೇಜುಗಳ ಮೆಟ್ಟಲನ್ನೇ ಮೆಟ್ಟಿದರು !

ರಾಜೇಂದ್ರಬಾಬುವಿನ ಅಣ್ಣನಿಗೆ ಸರ್ಕಾರದಿಂದ ರಾಯಬಹದೂರ್ ಪ್ರಶಸ್ತಿ ದೊರಕಿತ್ತು. ಅವರು ಛಪರಾ ಪೌರಸಭೆಯ ಉಪಾಧ್ಯಕ್ಷರು, ಗೌರವನ್ಯಾಯಮೂರ್ತಿಯೂ ಆಗಿದ್ದರು. ಸರ್ಕಾರದವರು ಪೌರಸಭೆಗಳವರು ಅಸಹಕಾರ ಚಳುವಳಿಯಲ್ಲಿ ಭಾಗವಹಿಸಕೂಡದೆಂದು ನಿಯಮ ಮಾಡಿದಾಗ ರೋಷ ಬಂದು ತಮ್ಮ ಪ್ರಶಸ್ತಿಯನ್ನು ಹಿಂದಕ್ಕೆ ಕಳಿಸಿದರು. ತಮ್ಮ ನ್ಯಾಯಮೂರ್ತಿಯ ಪದವಿಗೆ ರಾಜೀನಾಮೆ ಕೊಟ್ಟರು. ಆದರೆ ಪೌರಸಭೆಗೆ ತಾವು ಜನರಿಂದ ಚುನಾಯಿತರಾದವರು. ಅದಕ್ಕೂ ಸರ್ಕಾರಕ್ಕೂ ಯಾವ ಸಂಬಂಧವೂ ಇಲ್ಲವೆಂದು ಘೋಷಿಸಿ, ತಾವು ಸರ್ಕಾರದ ನಿಯಮದ ವಿರುದ್ಧ ಉಪಾಧ್ಯಕ್ಷ ಪದವಿಯಲ್ಲಿ ಹಾಗೆಯೇ ಉಳಿದುಕೊಂಡರು. ಈ ಕಾಲದಲ್ಲೇ ಕಾಂಗ್ರೆಸ್ ಸಂಸ್ಥೆಯ ಹೊಸ ಸಂಘಟನೆ ನಡೆದುದು. ಬಾಬುರಾಜೇಂದ್ರರೂ, ಹಕ್ ಸಾಹೇಬರೂ ಬಿಹಾರ್ ಪ್ರಾಂತ್ಯದ ಪುನಸ್ಸಂಘಟನಾಸಮಿತಿಯ ಸದಸ್ಯರಾಗಿ ಕೆಲಸಮಾಡಿದರು. ಆಗಲೇ ಎಲ್ಲೆಲ್ಲೂ ರಾಷ್ಟ್ರೀಯ ಶಾಲೆಗಳು ತೆರೆದುವು. ರಾಜೇಂದ್ರಬಾಬು ಮೊತ್ತಮೊದಲು ತಮ್ಮ ಬಿಹಾರ್ ಪ್ರಾಂತವನ್ನು ಪೂರ್ತಿ ಸುತ್ತಿ ಬಂದುದು ಕೂಡ ಆಗಲೇ ! ಸ್ವರಾಜ್ಯದ ಅವಶ್ಯಕತೆ, ಅಸಹಕಾರ ಚಳುವಳಿಗಳ ಬಗ್ಗೆ ಎಲ್ಲ ಕಡೆಯೂ ಭಾಷಣಮಾಡುತ್ತಿದ್ದರು. ಕಾಂಗ್ರೆಸ್ಸಿನಲ್ಲಿ ಜನರ ಆಸಕ್ತಿ ಮೂಡುವಂತೆ ಮಾಡಿದರು. ಅಲ್ಲದೆ 'ದೇಶ್' ಎಂಬ ಹಿಂದೀ ವಾರ ಪತ್ರಿಕೆಯನ್ನು ಹೊರಡಿಸಿ ಜನಜಾಗೃತಿಗೆ ನೆರವಾದರು. ಕ್ರಮೇಣ 'ಸರ್ಚ್‌ಲೈಟ್' ಎಂಬ ಇಂಗ್ಲೀಷ್ ದ್ವಿವಾರ ಪತ್ರಿಕೆಯೂ ಇವರ ಪಕ್ಷ ಪತ್ರಿಕೆಯೇ ಆಯಿತು. ಡಾಕ್ಟರ್ ಸಚ್ಚಿದಾನಂದ ಸಿನ್ಹರ ಈ ಪತ್ರಿಕೆ ಮೊದಲು ಅಸಹಕಾರ ಚಳುವಳಿಯ ವಿರೋಧಿಯಾಗಿತ್ತು. ಕೊನೆಗೆ ಇದು ಕೂಡ ರಾಜೇಂದ್ರಬಾಬುವಿನ ಕೈಗೇ ಬಂದಿತು. ಅಸಹಕಾರ ಚಳುವಳಿಯ ಪ್ರಚಾರದಲ್ಲಿ ಈ ಎರಡು ಪತ್ರಿಕೆಗಳೂ ಬಹಳ ಪ್ರಭಾವಯುತ ನೆರವು ನೀಡಿದುವು.

ಅಸಹಕಾರ ತೀರ್ಮಾನವನ್ನು ೧೯೨೦ ರ ಡಿಸೆಂಬರಿನ ನಾಗಪುರ ಸಮ್ಮೇಲನದಲ್ಲಿ ಒಪ್ಪಲಾಯಿತು. ದೇಶವನ್ನು ಅದಕ್ಕಾಗಿ ಸಿದ್ಧಗೊಳಿಸಬೇಕೆಂದು ಗಾಂಧೀಜಿ ಸಾರಿದರು. ಕಾಂಗ್ರೆಸ್ಸಿನ ಯೋಜನೆಯನ್ನು ಅನುಸರಿಸಿದರೆ ಒಂದು ವರ್ಷದಲ್ಲಿ ಖಂಡಿತವಾಗಿ ಸ್ವರಾಜ್ಯ ಸಿಗುವುದೆಂದೂ ಹೇಳಿದರು. ಬಿಹಾರಿನಲ್ಲಿ ಕೆಲಸ ಸುಗಮವಾಗಿ ನಡೆಯುತ್ತಿತ್ತು. ಕೆಲವು ಜಿಲ್ಲೆಗಳಲ್ಲಿ ಮದ್ಯಪಾನ ನಿಷೇಧವೂ ಆರಂಭವಾಯಿತು. ಸರ್ಕಾರದವರೂ ಸುಮ್ಮನೆ ಕುಳಿತಿರಲಿಲ್ಲ. ಕಾನೂನುಗಳ ಉಪಯೋಗಮಾಡಿ ದಬ್ಬಾಳಿಕೆ ನಡೆಸುತ್ತಿದ್ದರು! ಬೇಕಾದಷ್ಟು ಮಂದಿಯನ್ನು ದಸ್ತಗಿರಿ ಮಾಡಿ ಸೆರೆಮನೆಗೆ ಹಾಕಿದರು. ಆದರೆ ರಾಜೇಂದ್ರಬಾಬುವನ್ನು ಮಾತ್ರ ದಸ್ತಗಿರಿ ಮಾಡಲಿಲ್ಲ! ಈ ವರ್ಷವೇ ರಾಜೇಂದ್ರಬಾಬು ಕಾಂಗ್ರೆಸಿನ ಕಾರ್ಯಸಮಿತಿ (Working Committee) ಯ ಸದಸ್ಯರಾದರು. ವಿದೇಶೀ ಬಟ್ಟೆಗಳ ಬಹಿಷ್ಕಾರ, ಖಾದಿಯ ಪ್ರಚಾರ ಬಹಳ ಅವಶ್ಯಕವೆಂದು ಗಾಂಧೀಜಿ ಇಲ್ಲಿಯೇ ಎಲ್ಲರಿಗೂ ಮನದಟ್ಟು ಮಾಡಿಕೊಟ್ಟರು. ಬಿಹಾರಿನಲ್ಲಿ ಚರಕಾ ಸಂಸ್ಥೆಗಳು ಎಲ್ಲೆಲ್ಲೂ ಸ್ಥಾಪಿತವಾದುವು. ತಿಲಕ್ ಸ್ವರಾಜ್ಯ ನಿಧಿಗೆ ೭-೮ ಲಕ್ಷ ರೂಪಾಯಿ ಕೂಡಿಸಿದರು. ವಿದೇಶೀ ವಸ್ತ್ರಗಳ ಬಹಿಷ್ಕಾರವನ್ನು ಖಾದಿಪ್ರಚಾರವನ್ನೂ ಕೈಕೊಂಡು ರಾಜೇಂದ್ರಬಾಬು ಬಿಹಾರಿನಲ್ಲಿ ಸುತ್ತಿದರು. ಒಂದುಕಡೆ ಉತ್ಸಾಹದಿಂದ ಸತ್ಯಾಗ್ರಹದ ಸಿದ್ಧತೆ ನಡೆಯುತ್ತಿತ್ತು! ಮತ್ತೊಂದು ಕಡೆ ಸರ್ಕಾರ ಅದನ್ನು ಮುರಿಯುವ ಹಂಚಿಕೆ ಹಾಕುತ್ತಿತ್ತು!

ಸರ್ಕಾರ ೧೯೦೮ ರಲ್ಲಿ ಜಾರಿ ಮಾಡಿದ್ದ ಎರಡು ಕಾನೂನನ್ನು ಈಗ ಪುನಃ ಉಪಯೋಗಿಸಲಾರಂಭಿಸಿತು. ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆಕ್ಟ್ ಮತ್ತು ಆಕ್ರಮ ಸಭೆಗಳ ಕಾನೂನುಗಳನ್ನು ಕಾಂಗ್ರೆಸ್ಸಿನ ಮೇಲೆ ಉಪಯೋಗಿಸಿತು. ಸಂಘಟನೆ ನಡೆಯುವುದೇ ದೊಡ್ಡ ಅಕಾರ್ಯವೆಂದು ಸರ್ಕಾರ ತಿಳಿದಿತು. ಇದರಿಂದ ಕಾಂಗ್ರೆಸ್ ಎಲ್ಲೆಲ್ಲೂ ಸ್ವಯಂಸೇವಕ ದಲವನ್ನು ಸ್ಥಾಪಿಸಲಾರಂಭಿಸಿತು. ಖಾದೀಪ್ರಚಾರದ ಕಾರ್ಯವಂತೂ ಸಾಗುತ್ತಲೇ ಇತ್ತು. ಗಾಂಧೀಜಿಯ ದಸ್ತಗಿರಿ

ಯಾಗುವ ಸಂಭವವೂ ಇತ್ತು. ಅಹಮುದಾಬಾದಿನಲ್ಲಿ ಗಾಂಧೀಜಿಯುವರನ್ನು ಸತ್ಯಾಗ್ರಹದ ನಾಯಕರನ್ನಾಗಿ ಒಪ್ಪಲಾಯಿತು. ಅವರು ಬಾರ್ಡೋಲಿಯಲ್ಲಿ ಸತ್ಯಾಗ್ರಹವನ್ನಾರಂಭಿಸುವರೆಂದು ತಿಳಿಯಿತು. ಬಾಬುರಾಜೇಂದ್ರರು ಬಿಹಾರಿನ ಹಳ್ಳಿಗಳಲ್ಲಿ ಸತ್ಯಾಗ್ರಹ ಪ್ರಚಾರ ಮಾಡುತ್ತಿದ್ದಾಗ ಬಾರ್ಡೋಲಿಯಿಂದ ತಂತಿ ಬಂದಿತು. ಅಲ್ಲಿಗೆ ರಾಜೇಂದ್ರಬಾಬು ಹೋಗುವ ವೇಳೆಗೆ ಆಗಲೇ ಕಾರ್ಯಸಮಿತಿಯ ಸಭೆ ಮುಗಿದು ಹೋಗಿತ್ತು. ಚೌರೀಚೌರಾದಲ್ಲಿ ಒಂದು ಪೋಲೀಸ್ ಠಾಣೆಯನ್ನು ಪೋಲೀಸಿನವರೊಂದಿಗೆ ಸುಟ್ಟುಬಿಟ್ಟರೆಂಬ ಸುದ್ದಿ ಕೇಳಿ ಗಾಂಧೀಜಿ ಸತ್ಯಾಗ್ರಹ ನಿಲ್ಲಿಸುವ ತೀರ್ಮಾನಮಾಡಿದರು. ಗಾಂಧೀಜಿಯವರ ಈ ನಿರ್ಣಯ ದೇಶದ ಎಲ್ಲರಿಗೂ ಒಪ್ಪಲಿಲ್ಲ. ಇದರ ಬಗ್ಗೆ ಬಹಳ ತರ್ಕ, ಟೀಕೆಗಳು ನಡೆದುವು. ಆದರೆ ರಾಜೇಂದ್ರಬಾಬು ಅದನ್ನೊಪ್ಪಿದರು. ಗಾಂಧೀಜಿಯವರ ಅಹಿಂಸಾತ್ಮಕ ನಡೆಗೂ, ಈ ಹಿಂಸಾಕೃತ್ಯಕ್ಕೂ ಕೊಂಚವೂ ಸಮಂಜಸವಿರಲಿಲ್ಲ. ದೇಶವಿನ್ನೂ ಸತ್ಯಾಗ್ರಹಕ್ಕೆ ಸಿದ್ಧವಾಗಿಲ್ಲವೆನಿಸಿತು! ೧೯೨೧ರ ಫೆಬ್ರವರಿಯಲ್ಲಿ ಮಾಡಿದ ಈ ನಿರ್ಣಯವನ್ನು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಒಪ್ಪಿತು. ಅಲ್ಲದೆ ಗಾಂಧೀಜಿಯವರಿಂದ ಸೂಚಿತವಾದ ರಚನಾತ್ಮಕ ಕಾರ್ಯಕ್ರಮವನ್ನು ಒಪ್ಪಿತು. ಆದರೆ ಕಾಂಗ್ರೆಸ್ಸಿನಲ್ಲಿ ಇದರಿಂದ ಒಡಕುಂಟಾಯಿತು. ಗಾಂಧೀಜಿಯವರನ್ನು ದಸ್ತಗಿರಿಮಾಡಿ ಆರು ವರ್ಷ ಸಜಾ ವಿಧಿಸಿದರು. ಆಗ ರಾಜೇಂದ್ರಬಾಬು ನ್ಯಾಯಾಲಯದಲ್ಲಿ ಗಾಂಧೀಜಿಗೆ ಪ್ರಣಾಮಮಾಡುತ್ತಾ ಎಳೆಯ ಮಕ್ಕಳಂತೆ ಅತ್ತುಬಿಟ್ಟರು ಬಾಪೂಜಿ ಅವರಿಗೆ ಸಮಾಧಾನ ಹೇಳುತ್ತಾ ರಚನಾತ್ಮಕ ಕಾರ್ಯಕ್ರಮದಲ್ಲಿ ತೊಡಗಬೇಕೆಂದು ಹೇಳಿದರು. ಹರಿಜನೋದ್ಧಾರ, ವಿದೇಶೀ ಬಟ್ಟೆಗಳ ಬಹಿಷ್ಕಾರ, ಚರಕಾ ಮತ್ತು ಖಾದೀಪ್ರಚಾರ, ರಾಷ್ಟ್ರೀಯ ವಿದ್ಯಾಪ್ರಸಾರ ಮತ್ತು ಹಿಂದೂ-ಮುಸ್ಲಿಂ ಐಕ್ಯ ಇವುಗಳಲ್ಲಿ ರಾಜೇಂದ್ರಬಾಬು ಮಗ್ನರಾದರು. ಅಸ್ಸಾಮಿನಲ್ಲಿ ಮಾಲವೀಯರೊಂದಿಗೆ ಅಲ್ಲಿಯ ಜನರ ಸ್ಥಿತಿಗತಿಗಳನ್ನು ತಿಳಿದುಬರಲು ಸುತ್ತಾಡಿ ಬಂದರು. ಬಿಹಾರಿನಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು.

ಕಾಂಗ್ರೆಸ್ಸಿನಲ್ಲಿ ಎರಡು ಪಕ್ಷಗಳಾದುವು. ಕೌನ್ಸಿಲ್ಲುಗಳಲ್ಲಿ ಭಾಗವಹಿಸಬೇಕೆಂಬ ಸ್ವರಾಜ್ಯಪಕ್ಷ ಮತ್ತು ಭಾಗವಹಿಸಲಾಗದೆಂಬ ಗಾಂಧೀಜಿಯ ಪಕ್ಷ. ರಾಜೇಂದ್ರಬಾಬು ಗಾಂಧೀಜಿಯ ಪಕ್ಷದಲ್ಲಿಯೇ ಉಳಿದುಕೊಂಡಿದ್ದರು.

ಗಾಂಧೀಜಿ ಎರವಾಡಾ ಜ್ಯೈಲಿನಲ್ಲಿದ್ದರು. ಬಹಳ ಖಾಯಿಲೆಯಾದುದರಿಂದ ಅವರ ಬಿಡುಗಡೆಯಾಯಿತು. ಅವರು ಜುಹುವಿನಲ್ಲಿ ಆರಾಮು ತೆಗೆದುಕೊಳ್ಳುತ್ತಿದ್ದರು. ಸ್ವರಾಜ್ಯ ಪಕ್ಷದವರಿಗೂ ಅವರಿಗೂ ಒಂದುಬಗೆಯ ಒಪ್ಪಂದವೂ ಆಯಿತು. ಸ್ವರಾಜ್ಯ ಪಕ್ಷದವರು ಕೌನ್ಸಿಲ್ಲುಗಳಿಗೆ ಹೋಗಲು ಅವರ ಅಭ್ಯಂತರವೇನೂ ಇರಲಿಲ್ಲ. ಈ ಸಂದರ್ಭದಲ್ಲೇ ಹಿಂದೂಮುಸ್ಲಿಂ ಕಲಹಗಳು ದೇಶದಲ್ಲೆಲ್ಲಾ ಹರಡಿಕೊಂಡವು. ಮನೆಮಠಗಳು ನಾಶವಾಗಿ, ಬಹಳ ಪ್ರಾಣಗಳೂ ಕಳೆದುವು. ಈ ಕಲಹದಿಂದ ಗಾಂಧೀಜಿಯ ಮನಸ್ಸು ಬಹಳ ಕ್ಷುಬ್ಧವಾಗಿ ಅವರು ಹಿಂದೂಮುಸ್ಲಿಂ ಐಕ್ಯತೆಗಾಗಿ ೨೧ ದಿವಸಗಳ ಉಪವಾಸ ಮಾಡಿದರು. ಫಲವಾಗಿ ಐಕ್ಯತಾ ಸಮಿತಿಯೊಂದು ಸ್ಥಾಪಿತವಾಯಿತು. ಅದರಲ್ಲಿ ರಾಜೇಂದ್ರ ಬಾಬುವೂ ಪ್ರಮುಖ ಸದಸ್ಯರಾದರು.

ದೇಶಸೇವೆಗೆ ನಿಂತ ನಾಯಕರ ಕಥೆ ಸಾಮಾನ್ಯವಾಗಿ ದೇಶದ ಇತಿಹಾಸವೇ ಆಗುತ್ತದೆ. ರಾಜೇಂದ್ರಬಾಬುವಿನಂತಹವರು ಸಂಪೂರ್ಣವಾಗಿ ತಮ್ಮನ್ನು ತಾವ್ಯೇ ದೇಶಸೇವೆಗೆ ಅರ್ಪಿಸಿಕೊಂಡುಬಿಟ್ಟುದರಿಂದ, ಅವರ ಜೀವನದ ಕಥೆ ದೇಶದ ಸ್ವಾತಂತ್ರ್ಯದ ಕಥೆಯಲ್ಲಿ ಸಂಪೂರ್ಣವಾಗಿ ಬೆರೆತುಹೋಯಿತು. ಬಿಹಾರ್ ಪ್ರಾಂತ್ಯದ ಕಾಂಗ್ರೆಸ್ ಮತ್ತು ಖಾದಿ ಸಂಸ್ಥೆಯೆಂದರೆ ಬಾಬುರಾಜೇಂದ್ರಪ್ರಸಾದ್ ಎಂದೇ ಹೇಳಬಹುದು. ಸಂಸ್ಥೆಯನ್ನು ಕಟ್ಟಿ, ಸಂಸ್ಥೆಗಾಗಿ ದುಡಿದು, ತಾವು ಹಿನ್ನೆಲೆಯಲ್ಲಿ ನಿಂತ ಸಂಕೋಚಜೀವಿ ಬಾಬುರಾಜೇಂದ್ರಪ್ರಸಾದ್. ಅವರ ಹೆಚ್ಚುಕಾಲ ಖಾದೀಪ್ರಚಾರದಲ್ಲಿ ಮತ್ತು ಬಿಹಾರ್ ವಿದ್ಯಾಪೀಠಕ್ಕೆ ಹಣ ಕೂಡಿಸುವುದರಲ್ಲಿಯೇ ಕಳೆಯುತ್ತಿತ್ತು. ಎಲ್ಲಾ ಕಡೆಯಲ್ಲಿಯೂ ಖಾದಿ ಪ್ರದರ್ಶನಗಳನ್ನು ನಡೆಸಲೂ ಆರಂಭಿ

ಸಿದರು. ಇದು ಬಹಳ ಫಲಕಾರಿಯಾಯಿತು. ಖಾದಿ ಪ್ರಚಾರ ಕ್ಕಾಗಿಯೇ ಅಖಿಲಭಾರತ ಚರಕಾ ಸಂಘ ಸ್ಥಾಪಿತವಾಯಿತು. ರಾಜೇಂದ್ರಬಾಬು ಅದರ ಆಜೀವಸದಸ್ಯರೂ ಆದರು !

ಅವರ ವ್ಯಕ್ತಿಜೀವನದಲ್ಲಿಯೂ ಈ ಕಾಲದಲ್ಲಿ ಕೆಲವು ಘಟನೆ ಗಳು ನಡೆದುವು. ಕಾಯಸ್ಥರಲ್ಲಿ ವರದಕ್ಷಿಣೆಯ ಗಲಾಟೆ ಬಹಳ. ರಾಜೇಂದ್ರಬಾಬು ಕಾಯಸ್ಥರ ಸಮ್ಮೇಲನದಲ್ಲಿ ಇದನ್ನು ವಿರೋಧಿಸಿ ಈ ಪದ್ಧತಿ ಪೂರ್ಣವಾಗಿ ನಿರ್ಮೂಲವಾಗಬೇಕೆಂದು ವಾದಿಸುತ್ತಲೇ ಇದ್ದರು. ಸಮ್ಮೇಳನದ ಸದಸ್ಯರು ತಮ್ಮ ಮನೆಗಳ ಮದುವೆಯಲ್ಲಿ ವರದಕ್ಷಿಣೆ ತೆಗೆದುಕೊಳ್ಳುವುದಿಲ್ಲವೆಂದು ಪ್ರಮಾಣಮಾಡುತ್ತಿದ್ದರು. ಆದರೆ ತಾವು ಸಮ್ಮೇಳನದ ಸದಸ್ಯರೆಂಬ ಅಧಿಕಾರವನ್ನು ಹೆಚ್ಚು ವರದಕ್ಷಿಣೆ ಪಡೆಯಲು ಗಾಳವನ್ನಾಗಿ ಉಪಯೋಗಿಸಿಕೊಂಡವರೂ ಹಲವರು ! ೧೯೨೫ರಲ್ಲಿ ರಾಜೇಂದ್ರಬಾಬು ಕಾಯಸ್ಥ ಸಮ್ಮೇಲನದ ಅಧ್ಯಕ್ಷರಾದರು. ಅಲ್ಲಿ ಎರಡು ಮಸೂದೆಗಳನ್ನು ತಂದರು. ಮದು ವೆಗಳಲ್ಲಿ ವರದಕ್ಷಿಣೆ ತೆಗೆದುಕೊಳ್ಳುವ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಬೇಕು. ಅಂತಹ ಮದುವೆ ಎಲ್ಲಾದರೂ ನಡೆದರೆ ಅದನ್ನೆಲ್ಲ ಕಾಯಸ್ಥರೂ ಬಹಿಷ್ಕರಿಸಬೇಕು ಎಂಬುದು ಒಂದು ಸೂಚನೆ. ಮತ್ತೊಂದು ಕಾಯಸ್ಥರ ಒಳಪಂಗಡಗಳಲ್ಲಿ ಕೊಟ್ಟು ತರುವುದು, ಊಟ ವ್ಯವಹಾರಗಳು ನಡೆಯಬೇಕು ಎಂದು ಒತ್ತಾಯ ಈ ಎರಡು ಸೂಚನೆಯನ್ನೂ ಕಾಯಸ್ಥ ಸಮ್ಮೇಲನ ಒಪ್ಪಿತು. ಆದರೆ ಅದನ್ನು ಜಾರಿಗೆ ತಂದವರು ಒಬ್ಬರೋ ಇಬ್ಬರೋ ! ರಾಜೇಂದ್ರಬಾಬು ತಮ್ಮ ಮನೆಯಲ್ಲಿ ಇದನ್ನು ಅಕ್ಷರಶಃ ಪಾಲಿಸಿದರು. ಅವರ ಮಗನ ಮತ್ತು ಅವರಣ್ಣನ ಮಕ್ಕಳ ಮದುವೆಯಲ್ಲಿ ವರದಕ್ಷಿಣೆಯ ಸುಳಿವೂ ಆಗ ಗೊಡಲಿಲ್ಲ.

ರಾಜೇಂದ್ರಬಾಬು ಈ ಕಾಲದಲ್ಲಿಯೇ ಯಾವುದೋ ಮೊಕದ್ದ ಮೆಯ ಸಂಬಂಧವಾಗಿ ಇಂಗ್ಲೆಂಡಿಗೆ ಹೋಗಬೇಕಾಯಿತು. ಈ ಮೊಕದ್ದಮೆ ೧೯೧೮ಕ್ಕೂ ಹಿಂದಿನದು. ಈಗ ಪ್ರೀವಿಕೌನ್ಸಿಲ್ಲಿಗೆ ಅದು ದಾಖಲಾದ್ದರಿಂದ ರಾಜೇಂದ್ರಬಾಬು ಇಂಗ್ಲೆಂಡಿಗೆ ಹೋದರು.

ಆಗ ಅವರು ಎಲ್ಲಾ ಸ್ವದೇಶೀ ಉಡುಪನ್ನೇ ತೊಡುತ್ತಿದ್ದುದು. ಲಂಡನಿನಲ್ಲಿ ತಮ್ಮ ಕೆಲಸ ಮುಗಿಸಿ ಅವರು ಯೂರೋಪಿನ ಪ್ರಮುಖ ಪಟ್ಟಣಗಳನ್ನು ನೋಡಿಕೊಂಡು ಬರಲು ಹೊರಟರು. ಆಗಲೇ ಆಸ್ಟ್ರಿಯಾದ ಒಂದು ಸಣ್ಣ ಹಳ್ಳಿಯಲ್ಲಿ ಯುದ್ಧ ವಿರೋಧಿ ಸಮ್ಮೇಲನ ನಡೆಯಿತು. ಅದಕ್ಕೆ ಫೆನ್ನರ್‌ಬ್ರಾಕ್‌ವೇ ಅಧ್ಯಕ್ಷರಾಗಿದ್ದರು. ಅಲ್ಲಿಗೆ ರಾಜೇಂದ್ರಬಾಬು ಹೋಗಿ ಅದರಲ್ಲಿ ಭಾಗವಹಿಸಿದರು. ಆ ಸಮ್ಮೇಲನದನಂತರ ಅಲ್ಲಿ ಬಂದ ಪ್ರತಿನಿಧಿಗಳು ಊರೂರಿನಲ್ಲಿ ಯುದ್ಧ ವಿರುದ್ಧ ಪ್ರಚಾರಮಾಡಬೇಕೆಂದೂ ತೀರ್ಮಾನವಾಯಿತ್ತು. ರಾಜೇಂದ್ರಬಾಬುವಿಗೆ ಇದರಿಂದ ಒಂದು ಹೊಸ ಅನುಭವವಾಯಿತು. ಗ್ರಾಟ್ಸ್ ಎಂಬ ಸ್ಥಳದಲ್ಲಿ ಇವರು ಭಾಷಣಮಾಡಬೇಕಾಗಿತ್ತು. ಇವರು ವೇದಿಕೆಗೆ ಬಂದೊಡನೆಯೇ ವಿರೋಧಿಗಳು ಗಲಾಟೆ ಮಾಡಲಾರಂಭಿಸಿದರು. ಕೂಗಾಟ ಅರಚಾಟ ಮುಗಿಸಿ ಕುರ್ಚಿಗಳನ್ನು ಮುರಿದು ಅದರಿಂದ ಭಾಷಣಕಾರರಿಗೆ ಹೊಡೆದರು. ರಾಜೇಂದ್ರರ ಜತೆಯಲ್ಲಿದ್ದ ದಂಪತಿಗಳಿಗೂ ಏಟು ಬಿದ್ದಿತು. ಮೂವರ ತಲೆಯಿಂದಲೂ ರಕ್ತ ಸುರಿಯುತ್ತಿತ್ತು. ಆಗ ಮೂವರೂ ಸಭೆಬಿಟ್ಟು ಬಂದುಬಿಟ್ಟರು. ಆಗ ಸಭೆಯಲ್ಲಿದ್ದವರೆಲ್ಲ ಆನಂದವಾಗಿ ಇವರ ಕಷ್ಟ ನೋಡುತ್ತ ಕುಳಿತಿದ್ದರು. ಒಬ್ಬ ಮಹಿಳೆ ಮಾತ್ರ ಎದ್ದುಬಂದು ಇವರ ಗಾಯಗಳನ್ನು ತೊಳೆದು ತಿನ್ನಲು ತಿಂಡಿಕೊಟ್ಟಳು. ಆದರೆ ಅದು ಮಾಂಸವಾದುದರಿಂದ ರಾಜೇಂದ್ರಬಾಬು ಅದನ್ನು ಸ್ವೀಕರಿಸಲಿಲ್ಲ. ಇಷ್ಟು ದೂರದೇಶದಲ್ಲೂ ಮಾನವತೆಯನ್ನು ಆಕೆಯಲ್ಲಿ ಕಂಡು ರಾಜೇಂದ್ರಬಾಬುವಿಗೆ ಬಹಳ ಆನಂದವಾಯಿತು. ಅಹಿಂಸೆಯಲ್ಲಿ ನಂಬಿಕೆ ಬಲವಾಯಿತು. ಈ ಯಾತ್ರೆಯ ಕಾಲದಲ್ಲೇ ರೋಮನ್ ರೋಲಾಂಡರನ್ನು ಭೇಟಿಮಾಡಿದುದು.

ಈ ಯೂರೋಪು ಯಾತ್ರೆಗೆ ಮೊದಲೇ ರಾಜೇಂದ್ರಬಾಬು ತಮ್ಮ ಸಂಸಾರದೊಂದಿಗೆ ರಾಮೇಶ್ವರಕ್ಕೆ ಹೋಗಿದ್ದರು. ಮದ್ರಾಸಿನಲ್ಲಿ ಕಾಂಗ್ರೆಸ್ ಅಧಿವೇಶನ ಆದಾಗ ದಕ್ಷಿಣದೇಶದಲ್ಲಿ ಸುತ್ತಿ ಹಾಗೆಯೇ ಸಿಂಹಳದ್ವೀಪಕ್ಕೂ ಹೋಗಿಬಂದರು. ಮದ್ರಾಸಿನಲ್ಲಿ

ಕಾಂಗ್ರೆಸ್ ಅಧಿವೇಶನ ಆಗುವಾಗ ೧೯೨೮ರಲ್ಲಿ ಸೈಮನ್ ಕಮಿಷನ್ ಭಾರತಕ್ಕೆ ಬಂದಿತ್ತು. ೧೯೨೦ರ ಹೊಸ ಸುಧಾರಣೆಯಂತೆ ಭಾರತದ ರಾಜಕೀಯ ಸ್ಥಿತಿಗತಿಯನ್ನು ಸರಿಯಾಗಿ ತಿಳಿಸಲು ೧೦ ವರ್ಷದೊಳ ಗಾಗಿ ಒಂದು ವಿಶೇಷ ಸಮಿತಿಯನ್ನು ಬ್ರಿಟಿಷ್ ಸರ್ಕಾರ ನೇಮಿಸ ಬೇಕಾಗಿತ್ತು. ಹತ್ತು ವರ್ಷ ತಡೆಯದೆ ೧೯೨೭ರಲ್ಲಿಯೇ ಈ ಕಮಿಷನನ್ನು ಬ್ರಿಟಿಷ್ ಸರ್ಕಾರ ಸ್ಥಾಪಿಸಿತು. ಈ ಕಮಿಷನ್ನಿನ ಅಧ್ಯಕ್ಷರು ಸರ್ ಜಾನ್ ಸೈಮನ್, ಉಳಿದ ಸದಸ್ಯರೆಲ್ಲಾ ಇಂಗ್ಲೀಷಿನ ವರೇ- ಇದರಲ್ಲಿ ಭಾರತೀಯರು ಯಾರೂ ಇರಲಿಲ್ಲ. ಈ ಕಮಿಷನ್ನು ೧೯೨೮ರಲ್ಲಿ ಭಾರತಕ್ಕೆ ಬರುವುದೆಂದು ಘೋಷಿಸಲಾಯಿತು. ಈ ಕಮಿಷನ್‌ಗೆ ಸರ್ಕಾರ ಮೊದಲೇ ವರದಿಯನ್ನು ಸಿದ್ಧಗೊಳಿಸಿತ್ತು. ಕಾಂಗ್ರೆಸ್ ಈ ಕಮಿಷನ್ನನ್ನು ವಿರೋಧಿಸಿತು. ದೇಶದ ಎಲ್ಲರಿಗೂ ಈ ಕಮಿಷನ್ನಿನ ಬಗ್ಗೆ ತಿರಸ್ಕಾರವೇ ಇತ್ತು. ಪ್ರದರ್ಶನಗಳ ಮೂಲಕ ಇದನ್ನು ವಿರೋಧಿಸಬೇಕು, ಬಹಿಷ್ಕರಿಸಬೇಕೆಂದು ತೀರ್ಮಾನವಾಯಿತು ಮದ್ರಾಸಿನಲ್ಲಿ ಈ ವೇಳೆಗೆ ಡಾಕ್ಟರ್ ಅನ್ಸಾರಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಈ ಅಧಿವೇಶನದಲ್ಲಿ ಪಂಡಿತ ಜವಹರಲಾಲನೆಹರು ಭಾರತದ ಪೂರ್ಣ ಸ್ವಾತಂತ್ರ್ಯದ ಬಗ್ಗೆ ತಂದ ಸೂಚನೆ, ಸೂಚನೆಯಾಗಿಯೇ ಉಳಿಯಿತು ಸೈಮನ್ ಕಮಿಷನ್ನಿನ ಬಗ್ಗೆ ಬರಿಯ ವಿರೋಧ ಸೂಚಿಸಿದರೇ ಸಾಲದು. ದೇಶಕ್ಕೆ ಹಿತಕಾರಿ ಯಾಗುವ ಒಂದು ಯೋಜನೆಯನ್ನು ಕಾಂಗ್ರೆಸ್ ಸಿದ್ಧಗೊಳಿಸಬೇಕು. ಎಲ್ಲ ಪಕ್ಷ ಪಂಗಡಗಳೂ ಸೇರಿದರೆ ಸರ್ಕಾರವನ್ನು ಆ ಯೋಜನೆಯ ನ್ನೊಪ್ಪುವಂತೆ ಒತ್ತಾಯ ಮಾಡಬಹುದೆಂದೂ, ಅಂತಹ ಯೋಜನೆ ತಯಾರಿಸಬೇಕೆಂದು ಈ ಅಧಿವೇಶನ ತೀರ್ಮಾನಿಸಿತು. ಪಂಡಿತ ಮೋತೀಲಾಲನೆಹರುರವರ ಅಧ್ಯಕ್ಷತೆಯಲ್ಲಿ ನೆಹರೂ ಸಮಿತಿ ಈ ವಿಧಾ ನದ ಯೋಜನೆಗೆ ನಿಯುಕ್ತವಾಯಿತು. ಗುಜರಾತಿನ ಬಾರ್ಡೋಲಿಯ ಸತ್ಯಾಗ್ರಹದಲ್ಲಿ ಅಭೂತ ಪೂರ್ವವಿಜಯ ದೊರಕಿತ್ತು. ಸರದಾರ್ ವಲ್ಲ ಭಾಯ್ ಪಟೇಲರು ಈ ಕರನಿರಾಕರಣೆಯ ಚಳುವಳಿಯ ನಾಯಕರಾ ಗಿದ್ದರು. ಸಂಘಟನೆ ಬಲವಾಗಿದ್ದರೆ, ತ್ಯಾಗ ಸತ್ಯಪೂರ್ಣವಾಗಿದ್ದರೆ

ಅಹಿಂಸಾತ್ಮಕ ಚಳುವಳಿ ಎಂತಹ ವಿಜಯಗಳಿಸಬಹುದೆನ್ನಲು ಇದೊಂದು ಉದಾಹರಣೆಯಾಗಿ ನಿಂತಿತು. ದೇಶದಲ್ಲೆಲ್ಲಾ ಉತ್ಸಾಹ ಉಕ್ಕಿ ಹರಿಯುತ್ತಿತ್ತು. ಸರಕಾರದ ಎಲ್ಲಾ ವಿಧವಾದ ದಬ್ಬಾಳಿಕೆಯನ್ನು ಎದುರಿಸಿ ಬಾರ್ದೋಲಿಯ ಸತ್ಯಾಗ್ರಹ ಫಲಕಾರಿಯಾಗಿತ್ತು. ಇದರಿಂದ ಮತ್ತೆ ದೇಶಾದ್ಯಂತ ಸತ್ಯಾಗ್ರಹದ ಮಾತಿನ ಚರ್ಚೆ ಆಗಲಾರಂಭವಾಯಿತು. ೧೯೩೦ರ ಸತ್ಯಾಗ್ರಹಕ್ಕೆ ಬಾರ್ದೋಲಿ ಸತ್ಯಾಗ್ರಹ ನೆಲ ಹಸನು ಮಾಡಿತು.

ನೆಹ್ರೂ ಸಮಿತಿ ಎಲ್ಲಾ ಪಕ್ಷಗಳಿಗೂ ಒಪ್ಪುವಂತಹ ಯೋಜನೆ ತಯಾರಿಸಿತು. ಕಾಂಗ್ರೆಸ್ ಇದನ್ನು ಇನ್ನೂ ಒಪ್ಪಿರಲಿಲ್ಲ ಆದರೆ ಪೂರ್ಣಸ್ವಾತಂತ್ರ್ಯವಾದಿಗಳಿಗೆ ಈ ಯೋಜನೆ ಸಮರ್ಪಕವಾಗಿರಲಿಲ್ಲ. ಸುಭಾಷ್‌ಚಂದ್ರಬೋಸ್ ಜವಾಹರಲಾಲನೆಹರುವಿನಂತಹ ನಾಯಕರು ಈ ಯೋಜನೆಯನ್ನು ವಿರೋಧಿಸಿದರು. ಈ ಯೋಜನೆಯಂತೆ ಭಾರತ (ಡೊಮಿನಿಯನ್) ಉಪನಿವೇಶಿಕ ಸ್ವರಾಜ್ಯಕ್ಕೆ ಒಪ್ಪಿಗೆ ಕೊಡುತ್ತಿತ್ತು. ಇದನ್ನು ಕಾಂಗ್ರೆಸ್ಸಿನ ಎಲ್ಲರೂ ಒಪ್ಪುತ್ತಿರಲಿಲ್ಲ. ಸೈಮನ್ ಸಮಿತಿಯನ್ನು ಜನರು ಬಹಿಷ್ಕರಿಸಿದರೂ ಅದು ತನ್ನಂತೆ ಕೆಲಸ ನಡೆಸಿಕೊಂಡು ಹೋಗುತ್ತಿತ್ತು. ಈಗ ಚಳಿಗಾಲವಾದ್ದರಿಂದ ಮತ್ತೆ ಭಾರತಕ್ಕೆ ಬಂದಿತು. ಈ ತನಕ ಯಾವ ಯಾವ ಜಿಲ್ಲೆಗಳಿಗೆ ಹೋಗಿರಲಿಲ್ಲವೋ ಅಲ್ಲಿಗೆ ಹೊರಟಿತು. ಎಲ್ಲೆಲ್ಲಿಯೂ "ಸೈಮನ್–ಹಿಂದಿರುಗು" ಕೂಗು ಕೇಳಿಬರುತ್ತಿತ್ತು. ಪಂಜಾಬಿನಲ್ಲಿ ಅದರ ವಿರೋಧಪ್ರದರ್ಶನದ ಮೇಲೆ ಲಾಠೀ ಪ್ರಯೋಗವಾಯಿತು. ಲಾಲಾಲಜಪತರಾಯರಿಗೆ ಬಹಳ ಏಟು ಬಿದ್ದಿತು. ಮೊದಲೇ ಅನಾರೋಗ್ಯದಿಂದಿದ್ದುದರಿಂದ ಅವರ ಸಾವನ್ನು ಈ ಪೆಟ್ಟು ತೀವ್ರಗೊಳಿಸಿತು. ಸಂಯುಕ್ತ ಪ್ರಾಂತದಲ್ಲಿ ಸೈಮನ್ ಸಮಿತಿಯ ವಿರೋಧ ಪ್ರದರ್ಶನದ ಮೇಲೆ ಲಾಠಿ ಪ್ರಯೋಗ ಬಲವಾಗಿಯೇ ನಡೆಯಿತು. ಪಂಡಿತ ಜವಹರಲಾಲ ನೆಹರುರವರಿಗೆ ಜೋರಾಗಿಯೇ ಏಟುಬಿತ್ತು. ಪಾಟ್ನಾಕ್ಕೆ ಈ ಸಮಿತಿ ಬರುವ ತಾರೀಕು ಗೊತ್ತಾಗಿತ್ತು.

ಪಾಟ್ನಾದಲ್ಲಿ ಸಮಿತಿಯ ಬಹಿಷ್ಕಾರ ಸಂಬಂಧವಾಗಿ ವಿರೋಧ

ಪ್ರದರ್ಶನವನ್ನು ರಾಜೇಂದ್ರಬಾಬು ಏರ್ಪಡಿಸುತ್ತಿದ್ದರು. ಸಮಿತಿಯ ವಿಶೇಷ ರೈಲು ಪಾಟ್ನಾ ಜಂಕ್ಷನ್ನಿಗೆ ಬಂದು ನಿಲ್ಲುವುದೆಂದು ಗೊತ್ತಾಗಿತ್ತು. ಜನರನ್ನು ತಡೆಯಲೆಂದು ಅಲ್ಲೆಲ್ಲ ಬೊಂಬಿನಿಂದ ಗಳುವಿನಿಂದ ಬೇಲಿಗಳನ್ನು ಹಾಕಿದ್ದರು. ಪಂಜಾಬ್ ಅಲಹಾಬಾದ್‌ಗಳಲ್ಲಿ ನಡೆದಂತೆ ಇಲ್ಲಿಯೂ ಲಾಠೀಪ್ರಯೋಗವಾಗುವುದು, ರಕ್ತ ಹರಿಯುವುದೆಂದು ಎಲ್ಲರೂ ನಿರೀಕ್ಷಿಸಿದ್ದರು. ಆದರೆ ರಾಜೇಂದ್ರಬಾಬು ಮತ್ತು ಪಾಟ್ನಾದ ಪೋಲೀಸ್ ಇನ್‌ಸ್ಪೆಕ್ಟರ್ ಜನರಲ್ ಸ್ಟೇನರ ಬುದ್ಧಿವಂತಿಕೆಯಿಂದ ಅಂತಹುದೇನೂ ಆಗಲಿಲ್ಲ. ಸೈಮನ್ ಸಮಿತಿಯ ಆಗಮನದ ಹಿಂದಿನ ಸಂಜೆ ಸಚ್ಚಿದಾನಂದಸಿನ್ಹರು ರಾಜೇಂದ್ರಬಾಬುವನ್ನು ಬರಹೇಳಿದರು. ಅಲ್ಲಿ ಹೋದರೆ ಪೋಲೀಸ್ ಇನ್‌ಸ್ಪೆಕ್ಟರ್ ಜನರಲ್ ಕುಳಿತಿದ್ದರು. ಪಂಜಾಬ್ ಮತ್ತು ಸಂಯುಕ್ತಪ್ರಾಂತಗಳಲ್ಲಿ ನಡೆದಂತೆ ದುರ್ಘಟನೆ ನಡೆಯುವುದು ತಮಗಿಷ್ಟವಿಲ್ಲ. ಆದ್ದರಿಂದ ಪೋಲೀಸರಿಗೂ ಪ್ರದರ್ಶನಕಾರರಿಗೂ ತಿಕ್ಕಾಟ ಆಗದಂತೆ ಹೇಗಾದರೂ ನೋಡಿಕೊಳ್ಳಬೇಕೆಂದು ಅವರು ರಾಜೇಂದ್ರಬಾಬುವಿಗೆ ಸೂಚಿಸಿದರು. ಜನತೆಯಂತೂ ಯಾವ ಬಗೆಯ ಶಸ್ತ್ರವನ್ನೂ ಪಡೆದಿರುವುದಿಲ್ಲ. ಆದ್ದರಿಂದ ಏನಾದರೂ ಅಚಾತುರ್ಯ ಆರಂಭವಾದರೆ ಪೋಲೀಸರಿಂದಲೇ ಎಂದು ರಾಜೇಂದ್ರಬಾಬು ಹೇಳಿದರು. ಜನ ಸಂಪೂರ್ಣವಾಗಿ ಅಹಿಂಸಾತ್ಮಕವಾಗಿರುವುದೆಂದೂ ಭರವಸೆಕೊಟ್ಟರು. ಆದರೆ ಸಭೆಸೇರಿದಾಗ ಜನರ ಗುಂಪಿನಿಂದ ಯಾರನ್ನಾದರೂ ಬೈದರೆ ಆಗ ರೋಷ ಬಂದು ಗುಂಪಿನಲ್ಲಿಯೇ ಹೊಡೆದಾಟವಾಗಬಹುದೆಂದೂ, ಹಾಗೆ ಗುಂಪಾಗದಿರುವುದೇ ಮೇಲೆಂದು ಸ್ಟೇನರು ಸೂಚಿಸಿದರು. ಅನಂತರ ಇದಕ್ಕೆ ರಾಜೇಂದ್ರಬಾಬು ಒಪ್ಪದಿರಲು ವಿರುದ್ಧಪ್ರದರ್ಶನದ ಸಭೆಗೆ ಸುಮಾರು ಎಷ್ಟು ಜನ ಬರುವರೆಂದು ಕೇಳಿ ತಿಳಿದುಕೊಂಡರು. ರಾಜೇಂದ್ರಬಾಬುವಿಗೆ ಸಭೆಯಲ್ಲಿ ಹೆಚ್ಚು ಜನ ಸೇರುವರೋ ಇಲ್ಲವೋ ಎಂಬ ಅನುಮಾನವಿತ್ತು. ಡಿಸೆಂಬರಿನ ಛಳಿಯಲ್ಲಿ ನಿಲ್ದಾಣಕ್ಕೆ ರೈಲು ಸೇರುವ ಬೆಳಗಿನಜಾವದ ವೇಳೆಗೆ ಜನ ಹೆಚ್ಚು ಸೇರುವರೋ ಎಂದು ಸಂದೇಹ. ಸುಮಾರು ಹತ್ತು ಸಾವಿರ ಎಂದು ಉತ್ತರಕೊಟ್ಟರೂ ಅಷ್ಟು ಜನರೂ ಬರುವರೋ

ಇಲ್ಲವೋ ಎಂದು ಮನಸ್ಸು ತವಕಪಡುತ್ತಿತ್ತು. ಕೊನೆಗೆ ಪ್ರದರ್ಶನ ವಂತೂ ಆಗಿಯೇ ಆಗುವ ನಿಶ್ಚಯ ಪ್ರಕಟಿಸಿದರು. ಸೈಮನ್ ಸಮಿತಿಯ ಪರವಾಗಿರುವ ಪಕ್ಷಕ್ಕೂ, ವಿರೋಧಿ ದಳಕ್ಕೂ ಜಗಳವಾಗದಂತೆ ಅವರನ್ನು ಬೇರೆಬೇರೆ ಜಾಗಗಳಲ್ಲಿ ಸೇರಿಸಿದರೆ ಸರಿಯೆಂದು ಇನ್‌ಸ್ಪೆಕ್ಟರ್ ಜನರಲ್ ಸೂಚಿಸಿದರು. ಈ ಬುದ್ಧಿವಂತ ಸೂಚನೆಯನ್ನು ರಾಜೇಂದ್ರಬಾಬು ಒಪ್ಪಿದರು. ರಸ್ತೆಯ ಒಂದು ಪಕ್ಕದಲ್ಲಿ ವಿರೋಧ ಪಕ್ಷವೂ, ಮತ್ತೊಂದು ಕಡೆ ಸಮಿತಿಯ ಪಕ್ಷವೂ ಇರಬೇಕೆಂದು ರಾಜೇಂದ್ರಬಾಬು ಹೇಳಿದರು. ಬೊಂಬಿನ ಕಟಕಟೆಯನ್ನು ದಾಟಿ ತಮ್ಮ ಗುಂಪಿನವರುಯಾರೂ ಹೊರಗೆ ಬರುವುದಿಲ್ಲವೆಂದು ರಾಜೇಂದ್ರ ಬಾಬು ಭರವಸೆಕೊಟ್ಟರು. ರಸ್ತೆಯ ಉತ್ತರಕ್ಕೆ ಸೈಮನ್ ಸಮಿತಿಯ ವಿರೋಧಕರೂ, ಉಳಿದವರು ದಕ್ಷಿಣಕ್ಕೂ ಸೇರಬೇಕೆಂದು ಗೊತ್ತಾಯಿತು. ಇದನ್ನು ರಾಜೇಂದ್ರಬಾಬು ಒಪ್ಪಲು ಇನ್ನೂ ಒಂದು ಕಾರಣವಿತ್ತು. ಸಮಿತಿಯವರು ಬಂದಾಗ ಅವರಿಗೆ ತಮ್ಮ ವಿರೋಧಪಕ್ಷ ಎಷ್ಟಿದೆ, ತಮ್ಮ ಪರವಾಗಿರುವವರು ಎಷ್ಟು ಕಡಿಮೆ ಜನರೆಂದು ತಿಳಿಯಲೂ ಇದು ಅನುವಾಗುತ್ತಿತ್ತು. ಮರುದಿನ ಬೆಳಗ್ಗೆ ಮೂರು ಗಂಟೆಗೇ ಎದ್ದು ನಗರದಲ್ಲೆಲ್ಲಾ ರಾಜೇಂದ್ರಬಾಬು ಪ್ರಭಾತಫೇರಿಗಳನ್ನು ನಡೆಸಿದರು. ಮೆರವಣಿಗೆಯ ಪ್ರವಾಹ ರೈಲುನಿಲ್ದಾಣದ ಕಡೆಗೆ ಹರಿಯಿತು. ೬ ಗಂಟೆಯ ವೇಳೆಗೆ ಇಪ್ಪತ್ತೈದು-ಮೂವತ್ತು ಸಾವಿರ ಜನ ಸೇರಿದರು. ಸಮಿತಿಯ ಪರವಾಗಿದ್ದ ಪಕ್ಷಕ್ಕೆ ಲಾರಿಗಳಲ್ಲಿ ಜನರನ್ನು ಕರೆತರುವ ಏರ್ಪಾಡನ್ನು ಮಾಡಿದ್ದರು. ಎಷ್ಟೋ ಜನರು ಲಾರಿಗಳಲ್ಲಿ ಬಂದು ಅನಂತರ ರಾಜೇಂದ್ರಬಾಬುಗಳ ಗುಂಪಿಗೆ ಬಂದು ಸೇರಿಬಿಡುತ್ತಿದ್ದರು. ಸಮಿತಿಗೆ ಸ್ವಾಗತ ನಡೆಸಲು ಸೇರಿದ್ದವರೆಲ್ಲಾ ಇನ್ನೂರು-ಮುನ್ನೂರು ಜನ. ಹೆಚ್ಚು ಜನ ಸರ್ಕಾರೀ ಅಧಿಕಾರಿಗಳು ಮತ್ತು ಅವರ ನೌಕರರು ! ತಮ್ಮ ಪಕ್ಷದ ಜನರು ನಿಂತಿದ್ದ ಬೊಂಬಿನ ಕಟಕಟೆಯ ಮುಂದೆ ರಾಜೇಂದ್ರಬಾಬು ನಿಂತಿದ್ದರು. ಅವರು ಅಲ್ಲಿ ನಿಂತುದಷ್ಟೇ ಜನರನ್ನು ಶಾಂತಗೊಳಿಸಲು ಸಾಕಾಯಿತು ಅಲ್ಲಿಗೆ ಇನಸ್ಪೆಕ್ಟರ್ ಜನರೆಲ್ಲರೂ ಬಂದರು. ಆಗ ನಾವು ಹೇಳಿದಂತೆ

ಹತ್ತುಸಾವಿರ ಜನ ಬಂದಿರುವರೋ ಎಂದು ರಾಜೇಂದ್ರಬಾಬು ಕೇಳಲು ಅವರು ಮೂವತ್ತಕ್ಕೂ ಹೆಚ್ಚು ಇರುವರೆಂದರು. ಆಗ ತಾವು ಈ ಬಗೆಯ ಯೋಚನೆಗೆ ಒಪ್ಪಿದುದು ಯಾಕೆಂದು ರಾಜೇಂದ್ರಬಾಬು ಅವರಿಗೆ ಹೇಳಿದರು. ಈ ಯುಕ್ತಿಗೆ ಇಬ್ಬರೂ ನಕ್ಕರು. ಅಂತೂ ಸೈಮನ್ ಸಮಿತಿಯ ವಿರೋಧ ಪ್ರದರ್ಶನ ಯಾವ ಆತಂಕವೂ ಇಲ್ಲದೆ ನಡೆಯಿತು. ಪಾಟ್ನಾದಲ್ಲಿ ಒಂದೇ ಕಡೆ ಹೀಗೆ ರಕ್ತಪಾತವಿಲ್ಲದೆ ವಿರೋಧಪ್ರದರ್ಶನ ಯಶಸ್ವಿಯಾಗಿ ನಡೆದುದು ! ಅದು ರಾಜೇಂದ್ರ ಬಾಬುವಿನ ವಿವೇಕದ ರೀತಿಯಿಂದ !

೧೯೨೮ರಲ್ಲಿ ರಾಜೇಂದ್ರಬಾಬುವಿನ ವ್ಯಕ್ತಿಜೀವನದಲ್ಲಿ ಒಂದು ಮುಖ್ಯ ಘಟನೆ ನಡೆಯಿತು. ಅದರ ಪ್ರಭಾವ ಅವರ ಹೃದಯಕ್ಕೆ ತಾಗಿತು. ವಿದೇಶೀವಸ್ತ್ರಬಹಿಷ್ಕಾರ ಮತ್ತು ಖಾದೀಪ್ರಚಾರದಲ್ಲೇ ತಮ್ಮ ಕಾಲವನ್ನೆಲ್ಲಾ ಉಪಯೋಗಿಸುತ್ತಿದ್ದರು. ಮಧುಜನಿಯೆಂಬ ಊರಿನ ಚರಕಾಸಂಘದ ಪ್ರಾಂತಸಮಿತಿಯಲ್ಲಿ ಕೆಲವು ದಿನ ನಿಂತರು. ಅಲ್ಲಿಗೆ ಮನೆಯಿಂದ ಒಂದು ತಂತಿ ಬಂದಿತು. ಅವರ ಅಣ್ಣ ಮಹೇಂದ್ರ ಪ್ರಸಾದರ ಮಗ ಜನಾರ್ದನನಿಗೆ ಒಂದು ಗಂಡುಮಗುವಾಗಿತ್ತು. ಮನೆಯಲ್ಲಿ ಎಲ್ಲರಿಗೂ ಇದು ಆನಂದದ ಸುದ್ದಿ. ಬಾಬು ರಾಜೇಂದ್ರರು ಊರಿಗೆ ಬಂದರು. ಹಳೆಯ ಪದ್ಧತಿಯಂತೆ ಪುತ್ರೋತ್ಸವ ನಡೆಸಿದ್ದರೆ ಮನೆಯಲ್ಲಿ ಗಾನ ನರ್ತನಗಳನ್ನೆಲ್ಲಾ ನಡೆಸಬೇಕಾಗಿತ್ತು. ಆದರೆ ನರ್ತನ ತಮಾಷೆಗಳಲ್ಲಿ ಸುಮ್ಮನೆ ಹಣ ವ್ಯಯ ಮಾಡಕೂಡದೆಂದು ಮನೆಯಲ್ಲಿ ವ್ರತಧಾರಣೆ ಮಾಡಿದ್ದರು. ಆದರೂ ಸ್ನೇಹಿತರ ಉತ್ಸಾಹ ದಿಂದ ಉತ್ಸವ ನಡೆಯಿತು. ಗಾನನರ್ತನಗಳಿರಲಿಲ್ಲ. ಪೂಜೆ, ಗೀತಾ ಪಠನಗಳು ನಡೆದುವು. ನೌಕರರಿಗೆ ಬಂಧುಗಳಿಗೆ ಹೊಸಬಟ್ಟೆಯ ಉಡುಗೊರೆ ಕೊಟ್ಟರು. ಈ ಸುಖ ಬಹಳ ದಿನ ಉಳಿಯಲಿಲ್ಲ. ಮಗು ಬಹಳ ಸುಂದರವಾಗಿತ್ತು. ಅದೊಂದೇ ಚಿಕ್ಕಮಗು ಮನೆಯಲ್ಲಿದ್ದುದ ರಿಂದ ಎಲ್ಲರಿಗೂ ಅದರಲ್ಲಿ ಪ್ರೇಮ, ರಾಜೇಂದ್ರಬಾಬುವಿಗಂತೂ ಅದ ರಲ್ಲಿ ಪ್ರಾಣಕ್ಕೆ ಪ್ರಾಣವಾಗಿ ಹೋಗಿತ್ತು. ಆ ವರ್ಷದ ಕೊನೆಯಲ್ಲಿ ರಾಜೇಂದ್ರಬಾಬು ಕಾಯಿಲೆ ಬಿದ್ದು ಛಪರಾದಲ್ಲೇ ಇದ್ದುದರಿಂದ

ಯಾವಾಗಲೂ ಮಗುವಿನ ಆಟಪಾಟದಲ್ಲೇ ಕಾಲಕಳೆಯುತ್ತಿದ್ದರು. ಹುಡುಗನಿಗೂ ರಾಜೇಂದ್ರಬಾಬುವಿಗೂ ಬಹಳ ಗಾಢಪ್ರೇಮ ಬೆಳೆಯಿತು. ಹುಡುಗನಿಗೆ ನಾಲ್ಕೈದು ವರ್ಷವಾದಾಗ ಮಹೇಂದ್ರ ಪ್ರಸಾದರು ತೀರಿಕೊಂಡರು. ಅದಾದ ಎರಡು ತಿಂಗಳಿಗೇ ಈ ಹುಡುಗನಿಗೂ ಟೈಫಾಯಿಡ್ ಬಂದು ತೀರಿಕೊಂಡ. ವೈದ್ಯರು ಮಗುವನ್ನುಳಿಸಲು ಎಷ್ಟು ಯತ್ನಿಸಿದರೂ ಸಾಗಲಿಲ್ಲ. ಈ ಸಾವಿನ ನೋವು ರಾಜೇಂದ್ರಬಾಬುವಿನ ಹೃದಯದಲ್ಲಿ ಪಟ್ಟಾಗಿ ಕುಳಿತಿತು. ಈ ಒಳನೋವಿನಿಂದ ಬಹಳ ಕೊರಗಿದರು. ಮನೆಯಲ್ಲಿ ಯಾರಿಗೆ ಮಕ್ಕಳಾದರೂ ಉತ್ಸವ ಮಾತ್ರ ಅಂದಿನಿಂದ ನಿಂತಿತು !

೧೯೨೮ರ ಕಲ್ಕತ್ತಾ ಕಾಂಗ್ರೆಸ್ಸಿನಲ್ಲಿ ನೆಹ್ರೂ ಸಮಿತಿಯ ಯೋಜನೆಯ ಚರ್ಚೆ ನಡೆಯಿತು. ಚರ್ಚೆ ಬಹಳ ಬಿರುಸಾಗಿಯೇ ಇತ್ತು. ಸುಭಾಷ್ ಚಂದ್ರಬೋಸ್ ಮತ್ತು ಪಂಡಿತ ಜವಾಹರಲಾಲ್ ನೆಹರು, ಪೂರ್ಣ ಸ್ವರಾಜ್ಯವೇ ಕಾಂಗ್ರೆಸ್ಸಿನ ಧ್ಯೇಯವೆಂದೂ, ಈ ಅರ್ಧರ್ಧ ಸ್ವಾತಂತ್ರ್ಯಬೇಡವೆಂದೂ ವಾದಿಸಿದರು. ಪಂಡಿತ ಮೋತಿಲಾಲ್ ನೆಹರು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದರು. ಅವರೇ ಸಮಿತಿಯ ಯೋಜನೆಯನ್ನು ಸಿದ್ಧಗೊಳಿಸಿದ್ದವರು. ಈ ಎರಡು ಪಕ್ಷಗಳ ಬಿರು ಚರ್ಚೆಗಳನ್ನು ಕೊನೆಗಾಣಿಸಲು ಗಾಂಧೀಜಿ ಮುಂದೆ ಬಂದರು. ಈಗ ಡೊಮಿನಿಯನ್ ಪದವಿಯನ್ನು ಸರ್ಕಾರ ಕೊಡಬೇಕು. ಹಾಗೇನಾದರೂ ಕೊಡದಿದ್ದರೆ ಆಗ ಮುಂದಿನ ವರ್ಷ ಪೂರ್ಣಸ್ವರಾಜ್ಯವನ್ನೇ ನಮ್ಮ ಧ್ಯೇಯವನ್ನಾಗಿ ತೀರ್ಮಾನಿಸೋಣವೆಂದು ಗಾಂಧೀಜಿ ಸಮಾಧಾನ ಸೂಚಿಸಿದರು. ಹಾಗೆಯೇ ನಿರ್ಣಯ ಕೂಡ ಆಗಿಹೋಯಿತು ! ಸುಭಾಷ್‌ಬಾಬುವನ್ನುಳಿದು ಮತ್ತೆಲ್ಲರೂ ಈ ನಿರ್ಣಯವನ್ನು ಒಪ್ಪಿದರು. ಈ ಕಲ್ಕತ್ತೆಯ ಅಧಿವೇಶನದಲ್ಲಿಯೇ ಒಂದು ವಿಧವಾಗಿ ಪೂರ್ಣಸ್ವಾತಂತ್ರ್ಯದ ಬೇರುಬಿಟ್ಟುದು. ಉಪನಿವೇಶಿಕಸ್ವರಾಜ್ಯ (ಡೊಮಿನಿಯನ್ ಪದವಿ) ಸಿಕ್ಕಿದರೂ ತಾನು ಸುಮ್ಮನಿರಲಾರೆನೆಂದು ಕಾಂಗ್ರೆಸ್ ತನ್ನ ನಿರ್ಣಯದಿಂದಲೇ ಸೂಚಿಸಿತ್ತು. ಅಲ್ಲದೆ ಪೂರ್ಣಸ್ವಾತಂತ್ರ್ಯದ ಧ್ಯೇಯವನ್ನು ಒಪ್ಪಿ

ಕೊಂಡಿತ್ತು. ಬ್ರಿಟಿಷ್ ಸರ್ಕಾರ ೧೯೨೯ರ ಡಿಸೆಂಬರ್ ೩೧ರೊಳಗಾಗಿ ಭಾರತಕ್ಕೆ ಉಪನಿವೇಶಕಸ್ವಾತಂತ್ರ್ಯ ಕೊಡಬೇಕು. ಇಲ್ಲದಿದ್ದರೆ ಬರುವ ವರ್ಷದ ಅಧಿವೇಶನದಲ್ಲಿ ಕಾಂಗ್ರೆಸ್ಸು ಪೂರ್ಣ ಸ್ವರಾಜ್ಯವೇ ತನ್ನ ಧ್ಯೇಯವೆಂದು ಸಾರುವುದು ಎಂದು ಗಾಂಧೀಜಿ ಹೇಳಿಬಿಟ್ಟರು.

---

೭

# ಸ್ವಾತಂತ್ರ್ಯ ದಿನ ಮತ್ತು ಸತ್ಯಾಗ್ರಹ

ದೇಶದಲ್ಲಿ ಮಿಂಚು ಹೊಕ್ಕಂತಾಯಿತು. ಗಾಂಧೀಜಿ ಕಲ್ಕತ್ತೆಯ ಅಧಿವೇಶನದ ನಂತರ ಕಾಂಗ್ರೆಸ್ಸಿನ ಕೆಲಸದಲ್ಲಿ ಸಂಪೂರ್ಣವಾಗಿ ತಮ್ಮ ಮನಸ್ಸಿಟ್ಟರು. ಇದರಿಂದ ದೇಶದ ಜನತೆಯಲ್ಲಿ ಈ ಮೊದಲೇ ಕೂಡಿದ್ದ ಜಾಗೃತಿ ಮತ್ತೂ ಹೆಚ್ಚಿತು. ಹಲವಾರು ಇತರ ಘಟನೆಗಳೂ ನಡೆದು ಅಶಾಂತಿ, ಕೋಲಾಹಲ ಹರಡಿತ್ತು. ಈ ಘಟನೆಗಳಲ್ಲಿ ಮುಖ್ಯವಾದುದು ೧೯೨೯ ರಲ್ಲಿ ನಡೆದ ಲಾಹೋರ್ ಪಿತೂರಿಯ ಮೊಕದ್ದಮೆ. ಇದರಲ್ಲಿ ಸರದಾರ್ ಭಗತ್‌ಸಿಂಗ್ ಮತ್ತಿತರರ ಮೇಲೆ ಸರ್ಕಾರದವರು ಮೊಕದ್ದಮೆ ಹೂಡಿದರು. ಲಾಲಾ ಲಜಪತ ರಾಯರನ್ನು ಲಾಠಿಯಿಂದ ಹೊಡೆದ ಪೋಲೀಸ್ ಅಧಿಕಾರಿಯನ್ನು ಭಗತ್‌ಸಿಂಗ್ ಗುಂಡುಹೊಡೆದು ಕೊಂದಿದ್ದ. ಅದೇ ನೆವವಾಗಿ ಸರ್ಕಾರ ಒಂದು ದೊಡ್ಡ ಕುತಂತ್ರ ನಡೆಸಿ ಇದೊಂದು ದಂಗೆಯೆಂದು ಸಾರಿತು. ಈ ಮೊಕದ್ದಮೆ ಬಹಳ ಕಾಲ ನಡೆಯಿತು. ಸೆರೆಮನೆಯೊಳಗೆ ಈ ಬಂದಿಗಳಿಗೆ ಸಾಕಷ್ಟು ಒಳ್ಳೆಯ ಸೌಕರ್ಯಗಳಿರಲಿಲ್ಲ. ಇದೂ ಅಲ್ಲದೆ ಅಧಿಕಾರಿಗಳೂ ದುರ್ವರ್ತಿಸುತ್ತಿದ್ದರು. ಇದರಿಂದ ಸೆರೆಮನೆಯಲ್ಲಿ ಬಂದಿಗಳು ಉಪವಾಸ ಮಾಡಲಾರಂಭಿಸಿದರು. ಅವರಲ್ಲಿ ಯತೀಂದ್ರನಾಥದಾಸ್ ೬೩ ದಿನಗಳ ಉಪವಾಸದ ನಂತರ ತೀರಿಹೋದರು. ಈ ಹುತಾತ್ಮನ ನೆನಪು ದೇಶದಲ್ಲಿ ಎಲ್ಲರನ್ನೂ ಕೆರಳಿಸಿತು. ಈವರೆಗೆ ರಾಜಕೀಯ ಕೈದಿಗಳನ್ನು ಕಳ್ಳಕಾಕರಂತೆಯೇ ನೋಡುತ್ತಿದ್ದ ಸರ್ಕಾರ ಈಗ ಅವರಿಗೆ ಬೇರೆ ವರ್ಗೀಕರಣಮಾಡಿತು. ಇದರಿಂದೇನೂ ಹೆಚ್ಚು ಅನುಕೂಲವಾಗಲಿಲ್ಲ. ಯತೀಂದ್ರನಾಥದಾಸರ ಮರಣದಿಂದ ದೇಶದಲ್ಲಿ ಹೊಸ ಚೇತನ ಮೂಡಿತು.

ಕಾಂಗ್ರೆಸ್ಸಿನ ನಿರ್ಧಾರದಂತೆ ೧೯೩೦ ರ ಜನವರಿ ೧ ನೆಯ ತಾರೀಕಿನೊಳಗಾಗಿ ದೇಶಕ್ಕೆ ಉಪನಿವೇಶಕ ಸ್ವಾತಂತ್ರ್ಯ ಸಿಗಬೇಕಾ

ಗಿತ್ತು. ಭಾರತದ ವೈಸರಾಯ್ ಇರ್ವಿನ್ ಕೂಡಲೇ ಇಂಗ್ಲೆಂಡಿಗೆ ಹೋಗಿ ಭಾರತ ಸಮಸ್ಯೆಯನ್ನು ಚರ್ಚಿಸಿ ಹಿಂತಿರುಗಿದರು. ತಕ್ಷಣ ಒಂದು ಘೋಷಣೆ ಹೊರಡಿಸಿದರು. ಅದರಲ್ಲಿ ಈತನಕ ಬ್ರಿಟಿಷ್ ಸರ್ಕಾರ ಹೊರಡಿಸಿದ ಘೋಷಣೆಗಳಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಮಾತೂ, ಉಪನಿವೇಶಕ ಸ್ವರಾಜ್ಯವೂ ಸೇರಿರುವುದೆಂದು ತಿಳಿಸಿಬಿಟ್ಟರು. ಅಂದರೆ ಬ್ರಿಟಿಷ್ ಸರ್ಕಾರ ತನ್ನ ಧೋರಣೆಯನ್ನು ಯಾವ ರೀತಿಯಲ್ಲೂ ಬದಲಾಯಿಸುವುದಿಲ್ಲವೆಂದು ಇದರ ನಿಜವಾದ ಅರ್ಥ. ಅಂತೆಯೇ ಕಾಂಗ್ರೆಸ್ಸಿಗೆ ಈ ಘೋಷಣೆ ಸಮಾಧಾನಕರವಾಗಿರ ಲಿಲ್ಲ. ಲಾಹೋರ್ ಕಾಂಗ್ರೆಸ್ಸಿನ ಮೊದಲು ಪಂಡಿತ ಮೋತೀಲಾಲ ನೆಹರು ಲಾರ್ಡ್ ಇರ್ವಿನರ ಭೇಟಿಮಾಡಿದರು. ಇಂಗ್ಲೆಂಡಿನಲ್ಲಿ ಭಾರ ತದ ಮಂತ್ರಿ ಭಾರತದಲ್ಲಿ ಉಪನಿವೇಶಕ ಸ್ವರಾಜ್ಯವೇ ಬಹಳ ವರ್ಷ ಗಳಿಂದ ನಡೆಯುತ್ತಿದೆಯೆಂದು ಹೇಳಿದುದನ್ನೇ ಲಾರ್ಡ್ ಇರ್ವಿನರು ಒತ್ತಿ ಒತ್ತಿ ಹೇಳಿದರು. ಬ್ರಿಟಿಷ್ ಸರ್ಕಾರ ಎಂದಿನಂತೆಯೇ ಎರಡು ನಾಲಿಗೆ ಮಾಡಿತು. ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಮೊದಲಿ ನಿಂದಲೂ ಹಿಂತೆಗೆಯುತ್ತಿತ್ತು. ಈಗಲೂ ಈ ಕುತಂತ್ರ ಹೂಡಿತು. ಪಂಡಿತ ಮೋತೀಲಾಲರಿಗೆ ಇದು ಚೆನ್ನಾಗಿ ತಿಳಿಯಿತು. ಇದೇ ಕಾಲದಲ್ಲೇ ಭಗತ್‌ಸಿಂಗರಿಗೆ ಮರಣದಂಡನೆಯೂ ವಿಧಿಸಲ್ಪಟ್ಟಿತು.

ಲಾಹೋರ್ ಕಾಂಗ್ರೆಸ್ ಬಹಳ ಜೋರಿನಿಂದ ನಡೆಯಿತು. ವೈಸರಾಯರನ್ನು ನೋಡಿ ಬಂದ ಗಾಂಧೀಜಿ ಮತ್ತು ಪಂಡಿತ ಮೋತೀಲಾಲ ನೆಹರೂ ಇಬ್ಬರಿಗೂ ಧ್ಯೇಯ ಸ್ಪಷ್ಟವಾಗಿತ್ತು. ಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಧ್ಯೇಯವೆಂದೂ ಈ ಸ್ವಾತಂತ್ರ್ಯವನ್ನು ಗಳಿಸಲು ಸತ್ಯಾಗ್ರಹ ನಡೆಸಬೇಕೆಂದೂ ಈ ಅಧಿವೇಶನದಲ್ಲಿ ತೀರ್ಮಾನ ವಾಯಿತು. ಅಧಿವೇಶನವಾದ ಕೆಲ ದಿನಗಳ ನಂತರ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಜನವರಿ ೨೬ನೆಯ ತಾರೀಕನ್ನು ಸ್ವಾತಂತ್ರ್ಯ ದಿನವನ್ನಾಗಿ ಘೋಷಿಸಿತು. ಅಂದು ಭಾನುವಾರ. ಎಲ್ಲಾ ಕಡೆ ಗಳಲ್ಲಿಯೂ ಬೆಳಗ್ಗೆ ಸಭೆ ಸೇರಬೇಕು. ಆಯಾ ಪ್ರಾಂತೀಯ ಭಾಷೆ ಯಲ್ಲಿ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಎಲ್ಲರೂ ತೆಗೆದುಕೊಳ್ಳಬೇಕೆಂದು

ತೀರ್ಮಾನಿಸಿತು. ಎಲ್ಲರೂ ಈ ಪ್ರತಿಜ್ಞೆಯನ್ನು ಅರ್ಥಮಾಡಿಕೊಂಡು ತೆಗೆದುಕೊಳ್ಳಬೇಕೆಂದೂ, ಆ ದಿನ ಗಂಭೀರ ದಿನವನ್ನಾಗಿ ಆಚರಿಸ ಬೇಕೆಂದೂ ದೇಶಕ್ಕೆ ಕಾಂಗ್ರೆಸ್ಸಿನ ಸಂದೇಶ ಬಂದಿತು.

ಆಗ ರಾಜೇಂದ್ರಬಾಬು ಖಾಯಿಲೆಯಿಂದ ಚೇತರಿಸಿಕೊಳ್ಳು ತ್ತಿದ್ದರು. ಆದರೆ ಜನವರಿ ೨೬ರಂದು ತಮ್ಮ ಹಳ್ಳಿಯಲ್ಲಿಯೇ ಸಭೆ ಯಲ್ಲಿ ಸ್ವಾತಂತ್ರ್ಯ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಉಳಿದವರಿಗೂ ಕೊಡಿಸಿದರು. ಆಗ ಎಲ್ಲಾ ಕಡೆಯಲ್ಲಿಯೂ ಸತ್ಯಾಗ್ರಹದ ಚರ್ಚೆ ಆರಂಭವಾಯಿತು. ಸತ್ಯಾಗ್ರಹ ಎಲ್ಲಿ ಮತ್ತು ಯಾವ ರೀತಿಯಲ್ಲಿ ಆರಂಭವಾಗುವುದೆಂದು ಎಲ್ಲರೂ ಉತ್ಸುಕತೆಯಿಂದ ಕಾದಿದ್ದರು. ಗಾಂಧೀಜಿ ಆಗ ತಮ್ಮ ಸಬರ್ಮತಿಯ ಸತ್ಯಾಗ್ರಹ ಆಶ್ರಮದಲ್ಲಿಯೇ ಇದ್ದರು. ಅಲ್ಲಿಯೇ ವರ್ಕಿಂಗ್ ಕಮಿಟಿಯ ಸಭೆಯೂ ಆಯಿತು. ಗಾಂಧೀಜಿ ಉಪ್ಪಿನ ಸತ್ಯಾಗ್ರಹವನ್ನು ಆರಂಭಿಸುವುದಾಗಿ ತೀರ್ಮಾನಿ ಸಿದರು. ಜನರಿಗೆ ಯಾವುದೊಂದು ಖರ್ಚು ಇಲ್ಲದೆ, ಕಂದಾಯವೂ ಇಲ್ಲದೆ ಸಿಗಬೇಕಾದ ಉಪ್ಪಿನ ಮೇಲೆ ಸರ್ಕಾರ ಕಂದಾಯ ವಿಧಿಸಿರು ವುದು ಅನ್ಯಾಯವೆಂದು ಗಾಂಧೀಜಿಯ ಅಭಿಮತ. ಸಣ್ಣ ವಿಷಯ ದಿಂದ ದೊಡ್ಡದನ್ನು ಸಾಧಿಸುವುದೇ ಗಾಂಧೀಜಿಯ ಹಿರಿತನದ ಲಕ್ಷಣ. ಈ ಸಣ್ಣ ಅನ್ಯಾಯವಾದ ಕಂದಾಯದ ವಿರುದ್ಧ ನಾವು ಸತ್ಯಾಗ್ರಹ ಹೂಡಿ ಜಯಿಸಿದರೆ ದೊಡ್ಡದರಲ್ಲಿಯೂ ನಾವು ಸಫಲರಾಗುವೆವೆಂದು ಅವರಿಗೆ ತಿಳಿದಿತ್ತು. ಆದ್ದರಿಂದ ಅವರು ಉಪ್ಪಿನ ಸತ್ಯಾಗ್ರಹದ ತೀರ್ಮಾನ ಮಾಡಿದರು. ವರ್ಕಿಂಗ್ ಕಮಿಟಿಯ ಸದಸ್ಯರಿಗೆ ಇದು ಫಲಕಾರಿಯಾಗುವುದೇ ಎಂದು ಅನುಮಾನ. ರಾಜೇಂದ್ರಬಾಬು ವಿಗೂ ಸಂದೇಹ. ಸಮುದ್ರದ ಕರೆಯಲ್ಲಿ ಉಪ್ಪುಮಾಡುವುದಾಗಲಿ, ಮಣ್ಣಿನಿಂದ ಉಪ್ಪುತೆಗೆಯುವುದಾಗಲಿ ಜನಕ್ಕೆ ಒಪ್ಪಿಗೆಯಾದೀತೇ ಎಂದೇ ಇವರೆಲ್ಲರ ಯೋಚನೆ. ರಾಜೇಂದ್ರಬಾಬುವಿಗೆ ಮತ್ತೊಂದು ಯೋಚನೆ ಬಂದಿತು. ಬಿಹಾರಿನಲ್ಲಿ ಚೌಕೀದಾರ್ ಕಂದಾಯವೆಂದು ಒಂದು ಕರವನ್ನು ಜನರಿಂದ ವಸೂಲುಮಾಡುತ್ತಿದ್ದರು. ಇದನ್ನು ವಸೂಲಿಮಾಡುವುದಕ್ಕಾಗಿ ಮನೆಮಠಗಳನ್ನು ವಶಪಡಿಸಿಕೊಂಡು

ಹರಾಜುಮಾಡುತ್ತಿದ್ದರು. ಉಪ್ಪಿನ ಕಾನೂನನ್ನು ಮುರಿಯುವುದಕ್ಕಿಂತ ಈ ಕಂದಾಯ ಕೊಡದಂತೆ ಸತ್ಯಾಗ್ರಹ ಯಾಕೆ ಮಾಡಬಾರದೆಂದು ಅವರಿಗನಿಸಿತು. ಆದರೂ ಸಾಮಾನ್ಯವಾಗಿ ಗಾಂಧೀಜಿಯ ಯೋಚನೆ ಯಾವಾಗಲೂ ಸರಿಯಾಗಿಯೇ ಇರುವುದೆಂದೂ ರಾಜೇಂದ್ರ ಬಾಬುವಿಗೆ ಅನುಭವದಿಂದ ತಿಳಿದಿತ್ತು. ಇದರಿಂದ ಬಿಹಾರಿನಲ್ಲಿಯೂ ಉಪ್ಪಿನ ಸತ್ಯಾಗ್ರಹ ನಡೆಸಲು ತೀರ್ಮಾನಿಸಿದರು.

ಗಾಂಧೀಜಿ ತಮ್ಮ ಸತ್ಯಾಗ್ರಹದ ಆರಂಭಕ್ಕೆ ಒಂದು ದಿನವನ್ನು ಗೊತ್ತುಮಾಡಿಕೊಂಡರು. ಅಂದು ಆಶ್ರಮದಿಂದ ಹೊರಟು ಕಾಲು ನಡಿಗೆಯಲ್ಲೇ ಸುಮಾರು ಒಂದು ತಿಂಗಳು ನಡೆದು ಸೂರತ್ ಜಿಲ್ಲೆಯ ದಂಡೀಗ್ರಾಮಕ್ಕೆ ಬಂದು ಅಲ್ಲಿ ಉಪ್ಪುಮಾಡುವುದಾಗಿ ತೀರ್ಮಾನಿಸಿದರು. ಏಪ್ರಿಲ್ ೬ನೆಯ ತಾರೀಕಿಗೆ ಅವರು ದಂಡಿಗೆ ತಲಪುವರೆಂದು ಗೊತ್ತಾಯಿತು. ಈ ಕಾಲದಲ್ಲೇ ಎಲ್ಲಾ ಕಡೆಯೂ ಸತ್ಯಾಗ್ರಹ ಆರಂಭವಾಗಬೇಕಾಗಿತ್ತು. ಗಾಂಧೀಜಿಯ ದಂಡೀಯಾತ್ರೆಯಲ್ಲಿ ಅವರೊಂದಿಗೆ ಮಾತುಕತೆ ಮುಗಿಸಿ ರಾಜೇಂದ್ರಬಾಬು ಬಿಹಾರಕ್ಕೆ ಬಂದರು. ಪಂಡಿತ ಜವಾಹರಲಾಲ ನೆಹರು ಅವರ ಜತೆಯಲ್ಲಿ ನಾಲ್ಕೈದು ದಿನ ಬಿಹಾರಿನಲ್ಲಿ ಎಲ್ಲೆಲ್ಲೂ ಭಾಷಣಮಾಡಿದರು. ರಾಜೇಂದ್ರಬಾಬು ಅವರನ್ನು ಎಲ್ಲ ಕಡೆಗೂ ಕರೆದೊಯ್ಯುತ್ತಿದ್ದರು. ೭ನೆಯ ಏಪ್ರಿಲ್‌ಗೆ ಎಲ್ಲರೂ ತಮ್ಮ ತಮ್ಮ ಪ್ರಾಂತಗಳಲ್ಲಿ ಉಪ್ಪಿನ ಕಾನೂನನ್ನು ಮುರಿಯಬೇಕೆಂದು ಗಾಂಧೀಜಿಯ ಸಂದೇಶ ಎಲ್ಲರಿಗೂ ಬಂದಿತು, ಬಿಹಾರಿನಲ್ಲಿಯೂ ಉಪ್ಪಿನಸತ್ಯಾಗ್ರಹ ಆರಂಭವಾಯಿತು. ರಾಜೇಂದ್ರಬಾಬು ಜನರನ್ನು ಉತ್ತೇಜನಗೊಳಿಸುತ್ತಾ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿಬರುತ್ತಿದ್ದರು.

ಪಾಟ್ನಾದಲ್ಲಿ ರಾಜೇಂದ್ರಬಾಬು ಬಂದಿಳಿದ ದಿನವೇ ಅಲ್ಲಿ ಉಪ್ಪಿನ ಸತ್ಯಾಗ್ರಹ ಆರಂಭವಾಯಿತು. ಕೆಲವರು ಸತ್ಯಾಗ್ರಹಿಗಳು ಒಂದು ಮೊಹಲ್ಲಾದಿಂದ ಬಾವುಟದ ಸಮೇತ ಮೆರವಣಿಗೆ ಹೊರಟರು. ದಾರಿಯಲ್ಲಿ ಪೋಲೀಸಿನವರು ಅವರನ್ನು ತಡೆದರು. ಸತ್ಯಾಗ್ರಹಿಗಳನ್ನು ಮುಂದಕ್ಕೆ ಬಿಡಲಿಲ್ಲ. ಅವರೆಲ್ಲ ನಡುದಾರಿಯಲ್ಲೇ

ಕುಳಿತರು. ರಾತ್ರಿಯೆಲ್ಲ ಹಾಗೆಯೇ ಕಳೆಯಿತು. ಮರುದಿನ ಅಲ್ಲಿ ದೊಡ್ಡ ಜನಸಂದಣಿ ಸೇರಿತು. ರಾಜೇಂದ್ರಬಾಬುವನ್ನು ಪೋಲೀಸ್ ಮುಖ್ಯಾಧಿಕಾರಿ ಬರಹೇಳಿ ಅರ್ಧಗಂಟೆಯೊಳಗಾಗಿ ಸತ್ಯಾಗ್ರಹಿಗಳನ್ನು ಅಲ್ಲಿಂದ ಹೊರಡಿಸಬೇಕೆಂದು ಹೇಳಿದ. ಅವರನ್ನು ನೀವು ದಸ್ತಗಿರಿ ಮಾಡಬಹುದೆಂದು ಬಾಬು ಹೇಳಿದರು. ಆದರೆ ಆತ ಬೇರೆ ಕಾರ್ಯಕ್ರಮವನ್ನು ತಾನು ಕೈಕೊಳ್ಳುವುದಾಗಿ ಹೇಳಿದ. ರಾಜೇಂದ್ರಬಾಬು ಅವನ ಮಾತನ್ನು ಒಪ್ಪಲಿಲ್ಲ. ಆ ದಿನ ಕುದುರೆಯ್ಲು ಸವಾರರಿಂದ ಜನರನ್ನು ತುಳಿಸಿದರು. ಅನಂತರ ಸತ್ಯಾಗ್ರಹಿಗಳನ್ನು ಸೆರೆಹಿಡಿದರು. ದಿನವೂ ಐದೈದು ಜನ ಸತ್ಯಾಗ್ರಹಿಗಳ ಗುಂಪು ಆ ಸ್ಥಳಕ್ಕೆ ಬರುತ್ತಿತ್ತು. ಅದನ್ನು ದಸ್ತಗಿರಿ ಮಾಡಿದೊಡನೆಯೇ ಮತ್ತೊಂದು ಗುಂಪು ಕೂಡಲೇ ಸಿದ್ಧವಾಗುತ್ತಿತ್ತು. ಪೋಲೀಸಿನವರು ಲಾಠಿಯಿಂದ ಹೊಡೆಯುತ್ತಿದ್ದರು. ಎಷ್ಟೋ ಬಾರಿ ರಾಜೇಂದ್ರಬಾಬುವಿಗೂ ಏಟು ಬಿದ್ದಿತು. ಕೊನೆಗೆ ಸರ್ಕಾರಿ ಅಧಿಕಾರಿಗಳೇ ಬಾಗಿದರು.

ಕೆಲದಿನಗಳನಂತರ ಗಾಂಧೀಜಿಯವರ ದಸ್ತಗಿರಿಯಾಯಿತು. ಪಂಡಿತ ಜವಹರಲಾಲರನ್ನು ಈ ಮೊದಲೇ ಬಂಧಿಸಿಬಿಟ್ಟಿದ್ದರು. ಮೋತೀಲಾಲ ನೆಹರು ಜೂನ್ ತಿಂಗಳತನಕ ಹೊರಗಿರಲು ಸಾಧ್ಯವಾಯಿತು. ಬಿಹಾರಿನಲ್ಲಿ ಉಪ್ಪಿನ ಸತ್ಯಾಗ್ರಹ ಬಿರುಸಾಗಿಯೇ ನಡೆಯಿತು. ಜೂನ್ ತಿಂಗಳತನಕ ಈ ಕಾರ್ಯಕ್ರಮ. ಅನಂತರ ವಿದೇಶೀ ವಸ್ತ್ರ ಬಹಿಷ್ಕಾರ ಮತ್ತು ಮದ್ಯನಿಷೇಧ ನಡೆಸಬೇಕು. ಮಳೆಗಾಲ ಮುಗಿದೊಡನೆಯೇ ಚೌಕೀದಾರ ಕಂದಾಯ ನಿರಾಕರಣೆಯ ಚಳುವಳಿ ಹೂಡಬೇಕೆಂದು ರಾಜೇಂದ್ರಬಾಬು ತೀರ್ಮಾನಿಸಿದರು. ಆರಂಭದಲ್ಲಿ ಇವರನ್ನು ಬಂಧಿಸುವ ಇಚ್ಛೆ ಸರ್ಕಾರಕ್ಕಿರಲಿಲ್ಲ. ರಾಜೇಂದ್ರಬಾಬು ಅದನ್ನು ಲೆಕ್ಕಿಸದೆ ತಮ್ಮಷ್ಟಕ್ಕೆ ತಾವು ಸತ್ಯಾಗ್ರಹದ ಕೆಲಸದಲ್ಲಿ ಮಗ್ನರಾಗಿದ್ದರು. ಇವರನ್ನು ದಸ್ತಗಿರಿ ಮಾಡಲು ಯಾವ ಜಿಲ್ಲಾಧಿಕಾರಿಯೂ ಜವಾಬ್ದಾರಿ ತೆಗೆದುಕೊಳ್ಳದಿರಲು ಕಾರಣ—ಅವರು ಒಂದು ದಿನ ಇದ್ದ ಜಿಲ್ಲೆಯಲ್ಲಿ ಮರುದಿನ ಇರುತ್ತಿರಲಿಲ್ಲ. ಸತ್ಯಾಗ್ರಹದ ಸಂಬಂಧದಲ್ಲಿ ಜಿಲ್ಲೆಯಿಂದ ಜಿಲ್ಲೆಗೆ

ಹೋಗಿಬರುತ್ತಿದ್ದುದರಿಂದ ಅವರನ್ನು ಹಿಡಿಯಲು ಆಗಿರಲಿಲ್ಲ. ರಾಜೇಂದ್ರಬಾಬು ಸತ್ಯಾಗ್ರಹದ ಕಾರ್ಯಕ್ರಮವನ್ನು ಎಲ್ಲೆಲ್ಲೂ ಪ್ರಚಾರಮಾಡುತ್ತಿದ್ದರು. ಹಳ್ಳಿಗಳಲ್ಲಿ ಉಪ್ಪಿನ ಸತ್ಯಾಗ್ರಹವೇ ಮುಖ್ಯ ಕಾರ್ಯಕ್ರಮವಾಗಿತ್ತು. ನಗರಗಳಲ್ಲಿ ಮದ್ಯ ನಿಷೇಧ ಮತ್ತು ವಿದೇಶೀ ವಸ್ತ್ರಗಳ ಬಹಿಷ್ಕಾರ ಮುಖ್ಯವಾಯಿತು. ವಿದೇಶೀ ವಸ್ತ್ರಗಳ ಬಹಿಷ್ಕಾರ ಪ್ರಬಲವಾಗಿ ನಡೆಯುತ್ತಿತ್ತು. ಬಿಹಾರಿನಲ್ಲಿಯೂ ಇದನ್ನು ಆರಂಭಿಸಿದರು. ಮದ್ಯದ ಅಂಗಡಿಗಳನ್ನು, ಬಟ್ಟೆಗಳ ಅಂಗಡಿಗಳನ್ನು ಪಿಕೆಟ್ ಮಾಡಲು ಹೆಚ್ಚಿಗೆ ಸ್ತ್ರೀಯರೇ ಹೋಗಬೇಕೆಂದು ಗಾಂಧೀಜಿ ಹಿಂದೆಯೇ ಬರೆದಿದ್ದರು. ಇದರಿಂದ ಹೆಂಗಸರು ಅಲ್ಲಲ್ಲಿ ಪಿಕೆಟಿಂಗ್ ನಡೆಸಲು ಹೋಗುತ್ತಿದ್ದರು. ಕೆಲವು ಕಡೆ ಇನ್ನೂ ಒಂದು ಬಗೆಯ ಪದ್ಧತಿ ಆರಂಭವಾಗಿತ್ತು. ಅಂಗಡಿಯ ಮಾಲೀಕರು ತಮ್ಮಲ್ಲಿರುವ ವಿದೇಶೀ ಬಟ್ಟೆಯನ್ನೆಲ್ಲಾ ಒಂದು ಗಂಟುಕಟ್ಟಿ ಅದಕ್ಕೆ ಕಾಂಗ್ರೆಸ್ಸಿನ ಮುದ್ರೆಹಾಕಿಸಿ ತೆಗೆದಿಡುತ್ತಿದ್ದರು. ಕಾಂಗ್ರೆಸ್ಸಿನ ಅಪ್ಪಣೆ ಬರುವತನಕ ಅದನ್ನು ಮಾರುವುದಿಲ್ಲವೆಂದು ಮುಚ್ಚಳಿಕೆ ಬರೆದುಕೊಡುತ್ತಿದ್ದರು. ಬಿಹಾರಿನ ದೊಡ್ಡನಗರಗಳಲ್ಲಿಯೇ ಅಲ್ಲದೆ ಹಳ್ಳಿಯ ವ್ಯಾಪಾರಿಗಳೂ ಕೂಡ ಈ ಪದ್ಧತಿಯನ್ನೇ ಅನುಸರಿಸಿದರು. ಕೆಲವು ಜಿಲ್ಲೆಗಳಲ್ಲಿ ಮದ್ಯ ನಿಷೇಧ ಬಹಳ ಜೋರಿನಿಂದ ಸಾಗಿತು. ಅಲ್ಲಿ ಸರ್ಕಾರ ದಬ್ಬಾಳಿಕೆ ನಡೆಸಿತು. ಗೋಲಿಬಾರು ಲಾಠಿಏಟುಗಳು ಸಾಮಾನ್ಯವಾದುವು. ಗಡಿ ಪ್ರದೇಶದ ಪಠಾಣರ ಮೇಲಂತೂ ಗುಂಡಿನ ಸುರಿಮಳೆಯೇ ಆಯಿತು. ಅಸೆಂಬ್ಲಿಯ ಮೊದಲನೆಯ ಸ್ಪೀಕರ್ ಆಗಿದ್ದ ವಿಠಲಭಾಯಿ ಪಟೇಲರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಗಡಿಪ್ರದೇಶಕ್ಕೆ ಹೋದರು. ಅದರ ಬಗ್ಗೆ ಅವರು ಪ್ರಕಟಿಸಿದ ವರದಿಯನ್ನು ಸರ್ಕಾರ ನಿಷೇಧಿಸಿ ಮುಟ್ಟುಗೋಲು ಹಾಕಿಕೊಂಡಿತು. ಆದರೂ ಗಾಳಿಯಲ್ಲೇ ಸುದ್ದಿ ಹಾರಾಡಿ ಎಲ್ಲ ಕಡೆಗೂ ಹರಡಿತು.

ಬಿಹಾರಿನಲ್ಲಿ ಹೆಂಗಸರಿಗೆ ಪರದೆಯ ಪದ್ಧತಿಯುಂಟು. ಅಂತಹುದರಲ್ಲಿಯೂ ೧೯೩೦ ರಲ್ಲಿ ಗಾಂಧೀಜಿಯ ಕರೆ ಕೇಳಿದೊಡನೆಯೇ ಪರದಾ ಪದ್ಧತಿಯನ್ನು ಮೂಲೆಗೊತ್ತಿ ಹೆಣ್ಣುಮಕ್ಕಳು ಅಂಗಡಿಗಳ

ಪಿಕೆಟ್ ಮಾಡಲು ಮುಂದೆ ಬಂದರು. ಪಾಟ್ನಾದಲ್ಲಿ ನಾಲ್ಕು ದಿನ ಈ ತರಹ ಪಿಕೆಟಿಂಗ್ (ತಡೆ) ಮಾಡಬೇಕಾಗಿ ಬಂತು. ಇದರಲ್ಲಿ ಸೇರಿದ ಎಷ್ಟೋ ಜನ ಹೆಣ್ಣುಮಕ್ಕಳು ಈತನಕ ಮನೆಯನ್ನು ಬಿಟ್ಟು ಹೊರಕ್ಕೇ ಬಂದವರಲ್ಲ! ಸಂಜೆಯತನಕ ಅವರು ಪಿಕೆಟಿಂಗ್ ನಡೆಸಿದ ಮೇಲೆ ಅವರವರ ಮನೆಯ ಗಂಡಸರು ಬಂದು ಕರೆದುಕೊಂಡು ಹೋಗುತ್ತಿದ್ದರು. ಈ ಪಿಕೆಟಿಂಗ್ ನಡೆಸಲು ಸುಶಿಕ್ಷಿತ ಯುವತಿಯರಲ್ಲದೆ ಆಶಿಕ್ಷಿತ ಸ್ತ್ರೀಯರೂ ಮುಂದೆ ಬಂದು ಕೆಲಸ ಮಾಡುತ್ತಿದ್ದರು.

ಭಾಗಲ್ಪುರ ಜಿಲ್ಲೆಯ ಬೀಹಪುರ ಗ್ರಾಮದಲ್ಲಿ ಒಂದು ವಿಚಿತ್ರ ಬಗೆಯ ಸತ್ಯಾಗ್ರಹ ಆರಂಭವಾಯಿತು. ಅಲ್ಲಿಯ ಜನ ಬಹಳ ಉದ್ರೇಕದವರು. ಯಾವ ಕೆಲಸಕ್ಕಾದರೂ ಸಿದ್ಧರಾಗತಕ್ಕವರು. ಅವರ ಹಟ ಬಹಳ. ಹಿಂದೆ ಒಬ್ಬ ಇಂಗ್ಲಿಷ್ ಜಮೀನ್ದಾರನಿಗೂ ಅಲ್ಲಿಯ ರೈತರಿಗೂ ಯಾವುದೋ ಜಮೀನಿನ ಸಂಬಂಧವಾಗಿ ಜಗಳ ಬಂದಿತ್ತು. ಜಮೀನ್ದಾರ ಕೆಲವರು ಗೂರ್ಖರನ್ನು ಅಲ್ಲಿ ಕಾವಲಿಟ್ಟ. ಒಂದು ಮಳೆಯರಾತ್ರಿ ಊರಿನ ರೈತರೆಲ್ಲ ಸೇರಿ ಅಲ್ಲಿದ್ದ ೨೦-೩೦ ಗೂರ್ಖರನ್ನೆಲ್ಲಾ—ಹಿಡಿದು ಹೊತ್ತುಕೊಂಡು ಹೋಗಿ ಗಂಗಾನದಿಯ ಪಾಲುಮಾಡಿದ್ದರು! ಇಂತಹ ಜನರಲ್ಲಿ ಸತ್ಯಾಗ್ರಹದ ಬಗ್ಗೆ ಸಹಜವಾಗಿಯೇ ಆಸಕ್ತಿ ಉತ್ಸಾಹಗಳಿದ್ದುವು. ಆದರೆ ಎಲ್ಲಿಯತನಕ ಅವರು ಅಹಿಂಸಾತ್ಮಕರಾಗಿರುವುದು ಸಾಧ್ಯ ಎಂಬುದೇ ಅನುಮಾನ! ಇಲ್ಲಿ ಒಂದು ಹೊಸ ನಮೂನೆಯ ಸತ್ಯಾಗ್ರಹ, ಒಂದು ಗಾಂಜಾ ಅಂಗಡಿಯ ನೆವವಾಗಿ ಆರಂಭವಾಯಿತು. ಅಲ್ಲಿಯ ರೈಲು ನಿಲ್ದಾಣದ ಪಶ್ಚಿಮಕ್ಕೆ ಒಂದು ಬಯಲಿನಲ್ಲಿ ಒಂದು ಕಾಂಗ್ರೆಸ್ ಆಶ್ರಮವಾಗಿತ್ತು. ಅಲ್ಲಿ ಖಾದಿ, ಚರಕಾ, ನೂಲು, ಹತ್ತಿ ಎಲ್ಲವನ್ನೂ ಇಟ್ಟಿದ್ದರು. ಕೆಲವು ಕಾಂಗ್ರೆಸ್ ಸ್ವಯಂಸೇವಕರು ಅಲ್ಲಿಯೇ ವಾಸಮಾಡುತ್ತಿದ್ದರು. ನಿಲ್ದಾಣದ ದಕ್ಷಿಣದಲ್ಲಿ ಐದಾರು ಅಂಗಡಿಗಳಿದ್ದುವು. ಅಲ್ಲಿಯೇ ಒಂದು ಗಾಂಜಾ ಅಂಗಡಿಯಿತ್ತು. ಸ್ವಯಂ ಸೇವಕರು ಅಲ್ಲಿ ಪಿಕೆಟಿಂಗ್ ಆರಂಭಿಸಿದರು. ಪೋಲೀಸಿನವರು ಒಂದು ದಿನ ಈ ಸ್ವಯಂಸೇವಕರಿಗೆ ಚೆನ್ನಾಗಿ ಹೊಡೆದು ಆಶ್ರಮದಿಂದ ಹೊರಗೆ ಹಾಕಿಬಿಟ್ಟರು. ಆಶ್ರಮ

ದಲ್ಲಿದ್ದ ಸಾಮಾನುಗಳನ್ನೆಲ್ಲಾ ಕಿತ್ತೆಸೆದು ಹಾಳುಮಾಡಿದರು. ಆಶ್ರಮ ವನ್ನು ತಮ್ಮ ವಶಕ್ಕೆ ತೆಗೆದುಕೊಂಡುಬಿಟ್ಟರು. ಸುತ್ತಲಿನ ಜನಕ್ಕೆ ಇದು ತಿಳಿದೊಡನೆಯೇ ಅವರು ಆಶ್ರಮವನ್ನು ಬಿಡಿಸಿಕೊಳ್ಳಲು ಸತ್ಯಾಗ್ರಹ ಹೂಡಿದರು. ಐದಾರು ಜನದ ಗುಂಪು ಆಶ್ರಮದ ಬಳಿಗೆ ಬಂದು ಬಾವುಟ ಹಿಡಿದುಕೊಂಡು ಹೋಗುತ್ತಿದ್ದರು. ಅವರು ದಸ್ತಗಿರಿಯಾಗುತ್ತಿದ್ದರು. ಪ್ರತಿ ದಿನವೂ ಸಂಜೆ ಐದು ಗಂಟೆಯ ವೇಳೆಗೆ ಈ ರೀತಿಯಲ್ಲಿ ಐದಾರು ಜನ ಆಶ್ರಮಕ್ಕೆ ಬಂದು ದಸ್ತಗಿರಿ ಯಾಗುತ್ತ ಬಂದರು. ಈ ಸತ್ಯಾಗ್ರಹವನ್ನು ನೋಡಲು ಸತ್ಯಾಗ್ರಹಿ ಗಳಿಗೆ ಉತ್ತೇಜನ ಕೊಡಲು ಜನ ಸಂದಣಿ ಸೇರುತ್ತಿತ್ತು. ಸುಮಾರು ೨೦ ರಿಂದ ೨೫ ಸಾವಿರದವರೆಗೆ ಜನ ಸೇರಿದ್ದರು. ರಾಜೇಂದ್ರ ಬಾಬುವೂ ಅಲ್ಲಿಗೆ ಹೋಗಿದ್ದರು. ಸತ್ಯಾಗ್ರಹಿಗಳನ್ನು ಸೆರೆಹಿಡಿದು ಜೈಲಿ ಗೊಯ್ದರು. ಅಲ್ಲಿಗೇ ಮುಗಿಯಿತೆಂದಿದ್ದಾಗ ಇದ್ದಕ್ಕಿದ್ದಂತೆ ಜನಗಳ ಗುಂಪಿನ ಮೇಲೆ ಪೋಲೀಸಿನವರು ಲಾಠಿಯ ಪ್ರಹಾರ ಆರಂಭಿಸಿದರು. ಜನರನ್ನಟ್ಟಿಸಿಕೊಂಡು ಬಂದು ಪೋಲೀಸಿನವರು ಹೊಡೆಯುತ್ತಿದ್ದರು. ರಾಜೇಂದ್ರಬಾಬುವಿನೊಂದಿಗೆ ಪ್ರೊಫೆಸರ್ ಅಬ್ದುಲ್ ಬಾರಿಯವರೂ ಹೋಗಿದ್ದರು. ಇಬ್ಬರಿಗೂ ಬಲವಾಗಿ ಏಟುಬಿದ್ದುವು. ಅಬ್ದುಲ್ ಬಾರಿಯವರು ಏಟುತಿಂದು ಕೆಳಗುರುಳಿದರು. ಆಮೇಲೂ ಒಬ್ಬ ಪೋಲೀಸಿನವನು ಅವರನ್ನು ಹೊಡೆಯಲು ಲಾಠಿ ಬೀಸಿದ. ಅದನ್ನು ಇನ್ನೊಬ್ಬ ಪೋಲೀಸಿನವನು ತನ್ನ ಲಾಠಿಯಿಂದ ತಡೆದ. ಮತ್ತೊಬ್ಬ ಅವನ ಜತೆಗಾರ ಬಾರಿಯವರನ್ನು ಹೊಡೆದ ಪೋಲೀಸಿನವನ ತಲೆಗೆ ಲಾಠಿ ಬೀಸಿ ಅವನನ್ನು ಉರುಳಿಸಿದ. ಪೋಲೀಸಿನವರಲ್ಲಿಯೂ ಎರಡು ಗುಂಪುಗಳಾಗಿದ್ದುವು. ಒಂದು ಲಾಠಿ ಪ್ರಯೋಗ ಮಾಡ ಬೇಕೆಂಬ ಪಕ್ಷ. ಅಸಹಾಯ ಜನರ ಮೇಲೆ ಲಾಠಿ ಪ್ರಯೋಗ ಮಾಡಕೂಡದೆಂದು ಇನ್ನೊಂದು ಪಕ್ಷ. ಆ ಪಕ್ಷದವರು ಸಾಧ್ಯ ವಾದಷ್ಟು ಜನರಿಗೆ ಪೆಟ್ಟು ಬೀಳದಂತೆ ತಡೆಯುತ್ತಿದ್ದರು. ಅವರಲ್ಲಿ ಬ್ಬರೇ ಬಾರಿಯವರನ್ನು ಸಾವಿನಿಂದ ಉಳಿಸಿದುದು. ಈ ಲಾಠೀ ಪ್ರಯೋಗವಾದೊಡನೆಯೇ ಭಾಗಲ್ಪುರದವರೆಲ್ಲ ರೋಷಗೊಂಡರು.

ಅಲ್ಲಿನ ಸ್ತ್ರೀಯರು ತಾವಾಗಿಯೇ ಪಿಕೆಟಿಂಗ್ ನಡೆಸಲು ಆರಂಭಿಸಿದರು. ವಿದೇಶೀ ವಸ್ತ್ರಗಳ ಅಂಗಡಿಗಳ ಮಾಲೀಕರು ತಾವಾಗಿಯೇ ಆ ಬಟ್ಟೆಗಳನ್ನು ಗಂಟುಕಟ್ಟಿಟ್ಟು ರಾಜೇಂದ್ರಬಾಬುವಿನ ಬಳಿ ಬಂದು ಕಾಂಗ್ರೆಸ್ ಮೊಹರು ಹಾಕಿಸಿದರು. ಅಂದು ಲಾಠಿಪ್ರಹಾರವಾದರೂ ಎಂದಿನಂತೆಯೇ ಸತ್ಯಾಗ್ರಹ ನಡೆಯಿತು. ಗಾಂಧೀ ಇರ್ವಿನ್ ಕರಾರು ಆಗುವತನಕ ದಿನವೂ ಐದಾರು ಜನ ಬೀಹಪುರದಲ್ಲಿ ಕಾಂಗ್ರೆಸ್ ಆಶ್ರಮದ ಬಳಿ ದಸ್ತಗಿರಿಯಾಗುತ್ತಿದ್ದರು ಕೊನೆಕೊನೆಗೆ ಪೋಲೀಸಿನವರು ಸತ್ಯಾಗ್ರಹಿಗಳನ್ನು ವಿಪರೀತ ಕ್ರೌರ್ಯದಿಂದ ದಂಡಿಸುತ್ತಿದ್ದರು. ಒಬ್ಬನನ್ನು ಲಾಠಿಯಿಂದ ಹೊಡೆದು ಬೀಳಿಸಿ ಕಿವಿಗೆ ಸೈಕಲ್ ಪಂಪಿನಿಂದ ಗಾಳಿ ತುಂಬಿ ಕಿವಿಯ ಒಳ ಚರ್ಮ ಕೀಳುವಂತೆ ಮಾಡಿದ್ದರು !

ಬೀಹಪುರದಿಂದ ಪಾಟ್ನಾಕ್ಕೆ ರಾಜೇಂದ್ರಬಾಬು ಬರುವ ವೇಳೆಗೆ ಅವರ ಮೇಲೆ ದಸ್ತಗಿರಿಯ ವಾರಂಟು ಹೊರಟಿತ್ತು. ಆದರೆ ಅವರು ವಾಯು ವೇಗದಿಂದ ಜಿಲ್ಲೆಗಳ ಸಂಚಾರಮಾಡುತ್ತಿದ್ದುದರಿಂದ ಹಲವು ದಿನಗಳು ಪೋಲೀಸರ ಕೈಗೆ ಅವರು ಸಿಗಲಿಲ್ಲ. ಒಂದು ಸಂಜೆ ಪಾಟ್ನಾದಲ್ಲಿ ಸಭೆ ನಡೆಯಿತು. ಶ್ರೀ. ವಿಠಲ್‌ಬಾಯಿ ಪಟೇಲರು ಮಾತನಾಡಿದರು. ಅವರನ್ನು ರಾತ್ರಿಯ ರೈಲಿನಲ್ಲಿ ಕಳಿಸಿಕೊಟ್ಟು ಛಪರಾಜಿಲ್ಲೆಯಲ್ಲಿ ಸುತ್ತಾಡಿ ರಾಜೇಂದ್ರಬಾಬು ಪಾಟ್ನಾಕ್ಕೆ ಬಂದರು- ಅಂದು ರಾತ್ರಿ ಒಂದು ಗಂಟೆಯ ವೇಳೆಗೆ ಅವರನ್ನು ದಸ್ತಗಿರಿ ಮಾಡಿದರು. ಛಪರಾ ಜೈಲಿನಲ್ಲಿಟ್ಟರು. ಅಲ್ಲಿ ಸುಮಾರು ೩೦೦-೪೦೦ ಮಂದಿ ಸತ್ಯಾಗ್ರಹಿಗಳು ಬಂದಿಗಳಾಗಿದ್ದರು. ರಾಜೇಂದ್ರಬಾಬುವಿನ ಮೇಲೆ ಮೊಕದ್ದಮೆಯಾಯಿತು. ಈಗ ಅವರ ಮೇಲೆ ತೀರ್ಪುಕೊಡುವ ನ್ಯಾಯಾಧೀಶರು ಹಿಂದೆ ಅವರ ಕಕ್ಷಿಗಾರರಾಗಿದ್ದವರೇ ! ಛಪರಾ ಜೈಲಿನಿಂದ ಒಂದು ಸಂಜೆ ರಾಜೇಂದ್ರಬಾಬುವನ್ನು ಹಜಾರಿಲಾಲ್ ಜೈಲಿಗೆ ಕರೆದೊಯ್ದರು. ಜನಗಳಿಗೆಲ್ಲಿ ತಿಳಿದು ರೈಲು ನಿಲ್ದಾಣಗಳಲ್ಲಿ ಸಭೆಗಳಾಗುವುವೋ ಎಂದು ಹೆದರಿ ಸುತ್ತುರಸ್ತೆಯಿಂದ ಕರೆದುಕೊಂಡು ಹೋದರು. ಅವರನ್ನು ಹೀಗೆ ಕರೆದೊಯ್ದ ಪೋಲೀಸ ಅಧಿಕಾರಿ ಬಹಳ ಹಿಂದೆ ರಾಜೇಂದ್ರಬಾಬುವಿನ ಸಹಪಾಠಿಯಾಗಿದ್ದರು.

ಅವರು ಕೊನೆಯತನಕ ನಾಚಿಕೆಯಿಂದ ರಾಜೇಂದ್ರಬಾಬುವಿಗೆ ಮುಖವನ್ನೇ ತೋರಿಸಲಿಲ್ಲ.

ರಾಜೇಂದ್ರಬಾಬುವಿಗೆ ಜೈಲಿನ ವಾಸ ಹೊಸದು. ಉಳಿದ ಸತ್ಯಾಗ್ರಹಿಗಳಿಗಿರದ ಸೌಕರ್ಯಗಳನ್ನೊಂದನ್ನೂ ಅವರು ತಾವೂ ತೆಗೆದ ಕೊಳ್ಳಲಿಲ್ಲ. ಜೈಲಿನಲ್ಲಿ ಬಟ್ಟೆ ನೇಯುವುದನ್ನು ಕಲಿತು ಹಲವಾರು ಗಜಗಳನ್ನು ನೇದರು. ಈ ಜೈಲಿನಲ್ಲಿದ್ದ ಮುಖ್ಯಾಧಿಕಾರಿ ಓದುಬರಹ ತಿಳಿಯದವನು. ಇವರಿಗೆ ಕೊಡುತ್ತಿದ್ದ ಪುಸ್ತಕಗಳನ್ನು ಆತ ಮೊದಲು ಮಂಜೂರು ಮಾಡಬೇಕಾಗಿತ್ತು. ರಾಜಕೀಯ (Political) ಎಂಬ ಪದವಿದ್ದ ಪುಸ್ತಕವನ್ನೆಲ್ಲಾ ಆತ ಮುಟ್ಟುಗೋಲುಹಾಕಿಕೊಳ್ಳುತ್ತಿದ್ದ. ಅವನ ಮೂರ್ಖತೆಯ ಕೊನೆಮುಟ್ಟಿದುದು ಕಾಲೇಜ್ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾದ Text Book of Political Economy (ರಾಜ್ಯಾಂಗ ಅರ್ಥ ಶಾಸ್ತ್ರ) ಯನ್ನು ಮುಟ್ಟುಗೋಲು ಹಾಕಿಕೊಂಡು A.B.C of Communism (ಸಮತಾವಾದದ ರೂಪ ರೇಖೆಗಳು) ಎಂಬ ಪುಸ್ತಕವನ್ನು ಸತ್ಯಾಗ್ರಹಿಗಳಿಗೆ ಕಳುಹಿಸಿದಾಗ. ರಾಜೇಂದ್ರಬಾಬು ಜೈಲಿನಲ್ಲಿ ಉಳಿದ ಕಾಂಗ್ರೆಸ್ ನಾಯಕರೊಂದಿಗೆ ಇದ್ದರು. ಎಲ್ಲರೂ ಸೇರಿ ಚರಕಾಸಂಘ ನಡೆಸಿದರು. ರಾಜಕೀಯ, ಚರ್ಚೆಯ ಜತೆಗೆ ಧಾರ್ಮಿಕ ಗ್ರಂಥಗಳ ಅಭ್ಯಾಸವನ್ನು ನಡೆಸಿದರು. ವಾಲ್ಮೀಕಿ ರಾಮಾಯಣ, ಉಪನಿಷತ್ತುಗಳನ್ನು ರಾಜೇಂದ್ರಬಾಬು ಮೊದಲಬಾರಿಗೆ ಪೂರ್ಣವಾಗಿ ಅಭ್ಯಾಸಮಾಡಿದರು. ಗಾಂಧೀಜಿಯ ಕೃತಿಗಳನ್ನು ವಿವಿಧ ವಿಚಾರಗಳ ರೀತಿಯಲ್ಲಿ ವಿಂಗಡಿಸಿ ವ್ಯಾಖ್ಯಾನ ಬರೆದರು. ಈ ವ್ಯಾಖ್ಯಾನ ಸೆರೆಯಿಂದ ಹೊರಬಂದಮೇಲೆ ಎಲ್ಲಿಯೋ ಕಳೆದು ಹೋಯಿತು. ಈ ಸೆರೆಮನೆಯಲ್ಲಿಯೇ ಸ್ವಾಮಿ ಸಹಜಾನಂದರೂ ಇದ್ದುದು. ಅವರು ಪತಂಜಲಿಯ ಯೋಗಸೂತ್ರಗಳನ್ನು ಎಲ್ಲರಿಗೂ ಕಲಿಸಿದರು. ಗೀತೆಯನ್ನು ದಿನವೂ ಅರ್ಥಸಾಹಿತ್ಯದೊಂದಿಗೆ ವಿವರಿಸುತ್ತಿದ್ದರು. ಸೆರೆಮನೆಯಲ್ಲಿಯೇ ಎಲ್ಲರೂ ಸೇರಿ "ಕಾರಾಗೃಹ" "ಕೈದಿ" ಎಂಬ ಹಸ್ತಲಿಖಿತ ಮಾಸಪತ್ರಿಕೆಗಳನ್ನು ಹೊರಡಿಸು

ತ್ತಿದ್ದರು. ರಾಜಕೀಯ ಮತ್ತು ಧಾರ್ಮಿಕ ಚರ್ಚೆಗಳು ಇದರಲ್ಲಿ ನಡೆಯುತ್ತಿದ್ದುವು. ಈ ಬಾರಿಯ ಜೈಲಿನ ವಾಸದಿಂದ ರಾಜೇಂದ್ರರಿಗೆ ಜೈಲಿನ ಬಗ್ಗೆ ಅಂತಹ ಸರಿಯಾದ ಅನುಭವ ಆಗಲಿಲ್ಲ. ಅವರ ಜತೆಗಾರರೆಲ್ಲಾ ಇಲ್ಲಯೇ ಇದ್ದುದರಿಂದ ಅದೂ ಒಂದು ಕಾಂಗ್ರೆಸ್ ಶಿಬಿರದಂತೆಯೇ ಅವರಿಗೆ ಸುಖಪ್ರದವಾಗಿ ತೋರಿತ್ತು ! ರಾಜೇಂದ್ರ ಬಾಬುವಿಗೆ ಡಿಸೆಂಬರಿನಲ್ಲಿ ಬಿಡುಗಡೆಯಾಯಿತು. ನೇರವಾಗಿ ಮುಂಬಯಿಗೆ ಬಂದರು. ಮುಂಬಯಿ ಸತ್ಯಾಗ್ರಹದ ಕೇಂದ್ರವಾಗಿತ್ತು. ಅಲ್ಲಿ ದಿನವೂ ಸಭೆಯಾಗಿ ಲಾಠಿಪೆಟ್ಟು ಗೋಲಿಯೇಟುಗಳು ಸಾಮಾನ್ಯವಾಗಿದ್ದುವು. ಬಿಹಾರಿನಲ್ಲಿ ಕಂದಾಯದ ವಿರುದ್ಧ ಚಳುವಳಿ ಜೋರಾಗಿ ನಡೆಯುತ್ತಿತ್ತು. ಸರ್ಕಾರ ಹಳ್ಳಿಗೆ ಹಳ್ಳಿಯನ್ನೇ ಸುಟ್ಟು ನೆಲಸಮಮಾಡುತ್ತಿತ್ತು. ಲಂಡನ್ನಿನಲ್ಲಿ ಈ ಸಮಯದಲ್ಲಿ ದುಂಡುಮೇಜಿನ ಪರಿಷತ್ತು ನಡೆಯಿತು. ಹೇಗಾದರೂ ಮಾಡಿ ಕಾಂಗ್ರೆಸ್ಸಿನ ಪ್ರತಿನಿಧಿಯನ್ನು ಇದಕ್ಕೆ ಕರೆಸಿಕೊಳ್ಳಬೇಕೆಂದು ಬ್ರಿಟಿಷ್ ಸರ್ಕಾರ ಪ್ರಯತ್ನಿಸಿತು ಪಂಡಿತ ಮೋತೀಲಾಲ ನೆಹರು ವಿಪರೀತ ಅನಾರೋಗ್ಯವಾದರೂ ಕಾಂಗ್ರೆಸ್ ಕಾರ್ಯಕ್ಕೆ ಮೈಸವೆಸಿ ಸಣ್ಣಾದರು. ಈಗ ಅವರ ಕಾಯಿಲೆ ವಿಪರೀತವಾಗಿ ತೀರಿಕೊಂಡರು. ಗಾಂಧಿ-ಇರ್ವಿನ್ ಕರಾರು ಈ ಸಮಯದಲ್ಲಿಯೇ ಆಯಿತು. ಸತ್ಯಾಗ್ರಹವೂ ನಿಂತಿತು. ಆದರೆ ಈ ಕರಾರು ಆದ ಕೆಲವೇ ದಿನಗಳಲ್ಲಿ ಇರ್ವಿನ್‌ರವರು ತಮ್ಮ ಪದವಿಯಿಂದ ನಿವೃತ್ತರಾಗಿ ಇಂಗ್ಲೆಂಡಿಗೆ ಹೊರಟುಹೋದರು. ಅವರ ಜಾಗಕ್ಕೆ ಬಂದ ವಿಲ್ಲಿಂಗ್ಡನ್ ಭಾರತದ ಬಗ್ಗೆ ತಿರಸ್ಕಾರ ಬುದ್ಧಿಯವರು. ಅವರು ಈ ಕರಾರು ಸರಿಯಾಗಿ ಕಾರ್ಯಗತವಾಗಲು ಬಿಡಲಿಲ್ಲ. ಭಾರತದ ಜನತೆಯ ಪ್ರತಿನಿಧಿಯೊಂದಿಗೆ ಇದೇ ಮೊದಲ ಬಾರಿ ಬ್ರಿಟಿಷ್ ಸರ್ಕಾರ ಒಂದು ಕರಾರಿಗೆ ಬಂದುದು ! ಆದರೆ ಬ್ರಿಟಿಷ್ ಸರ್ಕಾರ ಎಂದಿನಂತೆಯೇ ತನ್ನ ಉಳಿದ ಮಾತುಗಳನ್ನು ಮುರಿದಂತೆಯೇ ಇದನ್ನು ಮುರಿಯಿತು ! ಕರಾಚಿಯಲ್ಲಿ ಕಾಂಗ್ರೆಸ್ ಅಧಿವೇಶನ ನಡೆದು ಒಪ್ಪಂದವನ್ನು ಒಪ್ಪಿಕೊಂಡಿತು. ರಾಜೇಂದ್ರಬಾಬುವೂ ವರ್ಕಿಂಗ್ ಕಮಿಟಿಯ ಸದಸ್ಯರಾದರು. ಬಿಹಾ

ರಿಗೆ ರಾಜೇಂದ್ರಬಾಬು ಹಿಂತಿರುಗಿ ತಮ್ಮ ಪ್ರಾಂತದ ಸತ್ಯಾಗ್ರಹಿಗಳ ಬಿಡುಗಡೆಗಾಗಿ ಸರ್ಕಾರದೊಂದಿಗೆ ಪತ್ರವ್ಯವಹಾರದಲ್ಲಿ ತೊಡಗಿದರು. ಆದರೆ ಸರ್ಕಾರ ಅಷ್ಟು ಸುಲಭವಾಗಿ ಮಾತುಳಿಸಿಕೊಳ್ಳಲು ಸಿದ್ಧವಾಗಿರಲಿಲ್ಲ. ಪ್ರತಿಯೊಂದು ವಿಷಯಕ್ಕೂ ಯಾವುದಾದರೊಂದು ಬಗೆಯ ಅಡ್ಡಿ ಆತಂಕವನ್ನು ಸರ್ಕಾರ ತಂದೊಡ್ಡುತ್ತಿತ್ತು. ಗಾಂಧೀಜಿ ದುಂಡು ಮೇಜಿನ ಪರಿಷತ್ತಿಗೆ ಹೋಗಿಬಂದರು. ಆದರೆ ಅದರಿಂದ ಯಾವ ರೀತಿಯ ಫಲವೂ ಆಗಲಿಲ್ಲ. ಸರ್ಕಾರ ಮತ್ತೆ ತನ್ನ ಹಳೆಯ ಚಾಳಿಯಂತೆ ದಬ್ಬಾಳಿಕೆ ಹಿಂಸೆಯನ್ನು ಆರಂಭಿಸಿತು. ಕಾಂಗ್ರೆಸ್ಸನ್ನು ಹೇಗಾದರೂ ತುಳಿದು ಹಿಸುಕಿಹಾಕುವ ಮನಸ್ಸು ಮಾಡಿತ್ತು ಸರ್ಕಾರ! ಯಾವುದೋ ನೆವ ಬೇಕಾಗಿತ್ತು. ಆ ನೆಪವೂ ಸಿಕ್ಕಿತು, ಸಂಯುಕ್ತ ಪ್ರಾಂತದ ರೈತರು ಕಂದಾಯ ಕೊಡಲಾರದೆ ಜಮೀನ್ದಾರರ ಕೈಲಿ ಸಿಕ್ಕಿ ತೊಳಲುತ್ತಿದ್ದರು. ಅಲ್ಲಿ ಕರನಿರಾಕರಣೆಯ ಚಳುವಳಿಗೆ ಕಾಂಗ್ರೆಸ್ ವರ್ಕಿಂಗ್ ಕಮಿಟಿ ಒಪ್ಪಿಗೆ ಕೊಟ್ಟಿತು. ಸರ್ಕಾರ ಕಾಂಗ್ರೆಸ್ಸಿನ ಮೇಲೆ ಎರಗಿತು!

ಗಾಂಧೀಜಿ ಮುಂಬಯಿಯಲ್ಲಿ ಹಡಗಿನಿಂದಿಳಿದ ದಿನವೇ ಸರದಾರ್ ಪಟೇಲರ ಬಂಧನವಾಯಿತು. ವರ್ಕಿಂಗ್ ಕಮಿಟಿಯ ಸಭೆಗೆಂದು ಬರುತ್ತಿದ್ದ ಪಂಡಿತ ಜವಹರಲಾಲ್ ನೆಹರುರವರನ್ನು ಬಂಧಿಸಿ ದಾರಿಯಲ್ಲೆ ನಾಯಕರೆಲ್ಲರನ್ನೂ, ಗಾಂಧೀಜಿಯನ್ನೂ, ಸರ್ಕಾರ ಬಂಧಿಸಿತು. ಈ ಬಾರಿ ಸರ್ಕಾರ ತನ್ನ ದಬ್ಬಾಳಿಕೆಯನ್ನು ಸಂಪೂರ್ಣವಾಗಿ ನಡೆಸಿತು. ಕಾಂಗ್ರೆಸ್ ಸಮಿತಿಗಳನ್ನೂ, ಕಾಂಗ್ರೆಸ್ಸಿಗೆ ಸಂಬಂಧಪಟ್ಟ ಸಂಸ್ಥೆಗಳನ್ನೂ ನ್ಯಾಯಬಾಹಿರವೆಂದು ಘೋಷಿಸಿತು. ಸಿಕ್ಕಿದಲ್ಲೆಲ್ಲ ಗುಂಡು ಹಾರಿಸಿತು, ದಸ್ತಗಿರಿ ನಡೆಸಿತು, ಮನೆಮಠಗಳನ್ನು ಜಪ್ತಿಮಾಡಿತು. ಮುಂಬಯಿಯಿಂದ ಬಂದ ರಾಜೇಂದ್ರಬಾಬುವನ್ನು ಪಾಟ್ನಾದಲ್ಲಿ ದಸ್ತಗಿರಿಮಾಡಿ ಆರು ತಿಂಗಳ ಸಜಾ ವಿಧಿಸಿ ಹಜಾರೀಬಾಗ್ ಜೈಲಿನಲ್ಲಿಟ್ಟರು. ಹೊರಗೆ ಸತ್ಯಾಗ್ರಹ ತಾನೇತಾನಾಗಿ ನಡೆಯಿತು. ಈಬಾರಿ ಜನವರಿ ೪ ರಂದು ಸರ್ಕಾರದ ಕಾರ್ಯಕ್ರಮ ಆರಂಭವಾಗಿತ್ತು. ಜನವರಿ ೨೬ ಸ್ವಾತಂತ್ರ್ಯದಿನ

ದೇಶದಲ್ಲೆಲ್ಲಾ ಸಭೆಗಳಾದುವು, ಸರ್ಕಾರ ಗುಂಡು ಹಾರಿಸಿತು. ಬಿಹಾರಿನ ಎಲ್ಲಾ ಸೆರೆಮನೆಗಳೂ ತುಂಬಿತುಳುಕಿದುವು. ಹೊರಗಿದ್ದ ಕಾಂಗ್ರೆಸ್ಸಿನವರು ದಿಲ್ಲಿಯಲ್ಲಿ ಪೊಲೀಸರ ಕಣ್ಣಿಗೆ ಮಣ್ಣೆರಚಿ ವಿಶೇಷ ಅಧಿವೇಶನ ಕೂಡ ನಡೆಸಿದರು. ಈಬಾರಿ ಸರ್ಕಾರ ಹದಿನೈದು ದಿನಗಳಲ್ಲಿ ಎಲ್ಲಾ ಚಳುವಳಿಯನ್ನು ಮಟ್ಟಹಾಕುವುದಾಗಿ ತೀರ್ಮಾನಿಸಿತ್ತು. ಘೋಷಿಸಿತು. ಆದರೆ ದೇಶ ಸಂಪೂರ್ಣವಾಗಿ ಕಾಂಗ್ರೆಸ್ಸಿನ ಹಿಂದೆ ಬೆನ್ನಿನ ಬಲವಾಗಿ ನಿಂತಿತು. ಸತ್ಯಾಗ್ರಹ ಒಂದೇಸಮವಾಗಿ ನಡೆಯಿತು. ಸತ್ಯಾಗ್ರಹಿಗಳಿಗೆ ಯಾವವಿಧದಲ್ಲಾದರೂ ಸಹಾಯನೀಡಿದರೆ, ಅವರನ್ನು ಶಿಕ್ಷೆಗೆ ಗುರಿಪಡಿಸುತ್ತಿತ್ತು ಸರ್ಕಾರ. ಆದರೆ ಎಲ್ಲಿಂದಲೋ ನೀರು ಚಿಮ್ಮಿಬರುವಂತೆ ಕಾಂಗ್ರೆಸ್ಸಿಗೆ ಹೇಗೋ ನೆರವು ಸಿಗುತ್ತಲೇ ಇತ್ತು. ಸತ್ಯಾಗ್ರಹಕ್ಕೆ ಜನಗಳು ಬರುತ್ತಿದ್ದರು. ಹಣವೂ ಬರುತ್ತಿತ್ತು. ಬಿಹಾರಿನಲ್ಲಿಯಂತೂ ಹೆಚ್ಚುಜನ ಬಡವರು. ಉಳಿದ ಪ್ರಾಂತಗಳಲ್ಲಾದರೂ ಕಾಂಗ್ರೆಸ್ಸಿನಲ್ಲಿ ಹಲವರು ಜಮೀನ್ದಾರರೂ ಹಣವಂತರೂ ಇದ್ದರೂ ಇದ್ದರು. ಆದರೆ ಬಿಹಾರಿನಲ್ಲಿ ಎಲ್ಲ ಬಡವರೇ! ಆದರೂ ಹಣಕ್ಕೆ ಕೊರತೆಯಾಗಲಿಲ್ಲ. ಸಮಯಬಿದ್ದಾಗ ಹಣ ಸಿಗುತ್ತಿತ್ತು!

ರಾಜೇಂದ್ರಬಾಬು ಆರು ತಿಂಗಳ ಸಜೆ ಮುಗಿಸಿ ಬಿಡುಗಡೆಯಾದರು. ಬಿಡುಗಡೆಯಾದ ದಿನವೇ ವಿಪರೀತ ಜ್ವರವಾಯಿತು. ಕೆಲವು ದಿನ ಹಜಾರಿಬಾಗಿನಲ್ಲಿಯೇ ನಿಂತರು. ಅನಂತರ ಪಾಟ್ನಾಕ್ಕೆ ಬಂದು ಕೆಲವುಕಾಲ ಆರಾಮ ತೆಗೆದುಕೊಂಡರು. ಮೈ ಇನ್ನೂ ಬಲಹೀನವಾಗಿತ್ತು. ಕೆಲವುದಿನದನಂತರ ಮತ್ತೆ ಸುತ್ತಲಿನ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಯತ್ನಿಸಿದರು. ಅಖಿಲ ಭಾರತಕಾರ್ಯಸಮಿತಿಯವರನ್ನು ನೋಡಿದರು. ಅವರಿಗೆ ತಮ್ಮಿಂದಾದ ನೆರವುಕೊಟ್ಟರು. ಆದರೆ ಅವರ ಕಾರ್ಯದ ನಡುವೆ ಬಂದು ತಾವೇ ಜವಾಬ್ದಾರಿ ಹೊರುವ ಕೆಲಸಕ್ಕೆ ಹೋಗಲಿಲ್ಲ. ಮುಂಬಯಿ, ಕಲ್ಕತ್ತೆಗಳಿಗೆ ಹೋಗಿ ಹಣ ಕೂಡಿಸಿಕೊಟ್ಟರು. ತಾವು ಹೊರಗಿರುವುದು ಸರಿಯಲ್ಲ. ಸರಿಯಾದ ಸಮಯಸಿಕ್ಕಿದರೆ ಮತ್ತೆ ಜೈಲಿಗೆ ಹೋಗಬೇಕೆಂದು ತೀರ್ಮಾನಿಸಿಕೊಂ

ಡರು. ಈ ಕಾಲದಲ್ಲೇ ಗಾಂಧೀಜಿ ಹರಿಜನೋದ್ಧಾರಕ್ಕಾಗಿ ಉಪವಾಸ ಮಾಡಲಾರಂಭಿಸಿದುದು. ಕೊನೆಗೆ ಹರಿಜನರಿಗೆ ಗಾಂಧೀಜಿಯ ಇಷ್ಟ ದಂತೆ ಹಕ್ಕುಗಳನ್ನಿತ್ತುದರಿಂದ ಉಪವಾಸ ಮುಕ್ತಾಯಗೊಳಿಸಿದರು. ಅಸ್ಪೃಶ್ಯತೆಯ ನಿವಾರಣೆಯಾಗದುದು ಗಾಂಧೀಜಿಗೆ ದೊಡ್ಡ ಆತಂಕ ವಾಗಿತ್ತು. ರಾಜೇಂದ್ರಬಾಬು ಕೂಡ ಹರಿಜನೋದ್ಧಾರದಲ್ಲಿ ಮಗ್ನ ರಾದರು. ಬಿಹಾರಿನಲ್ಲಿ ಜನರಿಗೆ ಇವರ ಬಗ್ಗೆ ತಿಳುವಳಿಕೆ ಕೊಟ್ಟರು. ರಾಜಗೋಪಾಲಾಚಾರಿಯವರೊಂದಿಗೆ ದಕ್ಷಿಣಕ್ಕೆ ಹೋಗಿ ಗುಡಿಗಳಿಗೆ ಹರಿಜನರಿಗೆ ಪ್ರವೇಶದೊರಕಿಸುವ ಪ್ರಯತ್ನವನ್ನು ಮಾಡಿದರು. ತಿರುವಾಂಕೂರಿನ ಮಹಾರಾಜರೇನೋ ಕೆಲವು ಗುಡಿಗಳಿಗೆ ಹರಿಜನ ರಿಗೆ ಪ್ರವೇಶ ದೊರಕಿಸಿಕೊಟ್ಟರು. ಆದರೆ ಇದು ಉಳಿದಕಡೆ ಅಷ್ಟು ಫಲಕಾರಿಯಾಗಲಿಲ್ಲ.

ರಾಜೇಂದ್ರಬಾಬು ಕಲ್ಕತ್ತೆಯಲ್ಲಿ ಕೆಲವು ದಿನ ಉಳಿದುಕೊಂಡಿ ದ್ದರು. ಸತ್ಯಾಗ್ರಹಕ್ಕೆ ಹಣ ಬೇಕಾಗಿತ್ತು. ಜನರಲ್ಲಿ ಸತ್ಯಾಗ್ರಹದ ಬಗ್ಗೆ ಉತ್ಸಾಹ ಮತ್ತು ಶ್ರದ್ಧೆಯಿದ್ದರೂ, ನೇರವಾಗಿ ಎಲ್ಲರಿಗೂ ತಿಳಿ ದಂತೆ ಹಣಕೊಡಲು ಹೆದರಿಕೆಯಿತ್ತು. ಆದರೂ ಅವರು ಗುಟ್ಟಾಗಿ ಹಣವನ್ನು ಕೊಡುತ್ತಿದ್ದರು. ಕಾಶಿಯಲ್ಲಿ ಅಂತಹವರೊಬ್ಬರು ರಾಜೇಂದ್ರಬಾಬುವಿಗೆ ಸಿಕ್ಕಿದರು. ಅವರಿಗೆ ಬಲು ಹಿಂದಿನಿಂದ ಗಾಂಧೀಜಿಯ ಪರಿಚಯವಿತ್ತು. ಆದರೂ ನೇರವಾಗಿ ಎದುರಿಗೇ ಬಂದು ನೆನಪುಕೊಡಲು ಅವರು ಸಿದ್ಧರಾಗಿರಲಿಲ್ಲ. ರಾಜೇಂದ್ರಬಾಬು ಬೀದಿಯಲ್ಲಿ ಹೋಗುವಾಗ ಇದ್ದಕ್ಕಿದ್ದಂತೆ ಅವರ ಬಳಿ ಬಂದು "ನಿಮಗೆ ಹಣ ಬೇಕಲ್ಲವೇ ?" ಎಂದು ಅವರ ಕೈಲಿ ಹತ್ತುಸಾವಿರ ರೂಪಾಯಿ ಗಳನ್ನಿಟ್ಟು ಹೊರಟುಹೋದರು. ಹೀಗೆ ಹಣ ಕೊಟ್ಟವರು ಬಹಳ ಮಂದಿ. ಸುಮಾರು ೬-೭ ತಿಂಗಳು ಹೀಗೆಯೇ ಕಳೆದುವು. ೪ನೆಯ ಜನವರಿ ೧೯೩೩ರಂದು ತಮ್ಮ ದಸ್ತಗಿರಿಯಾಗಬಹುದೆಂದು ರಾಜೇಂದ್ರ ಬಾಬು ತಿಳಿದಿದ್ದರು. ಕಳೆದ ಜನವರಿ ೪ರಂದು ಗಾಂಧೀಜಿಯ ಬಂಧ ನವಾಗಿತ್ತು ಆದಿನದಂದು ಎಲ್ಲಕಡೆಯೂ ಸಭೆ ನಡೆದು ಮತ್ತೆ ಕಾಂಗ್ರೆಸ್ಸಿನ ಸಂದೇಶವನ್ನು ಹರಡುವ ಯೋಚನೆಯಿತ್ತು. ಈ

ನಡುವೆಯೇ ಆಚಾರ್ಯ ಕೃಪಲಾನಿಯವರು ರಾಜೇಂದ್ರಬಾಬುವಿನ ಬಳಿಗೆ ಬಂದರು. ಹಣದಸಲುವಾಗಿ ಯಾರಿಗೋ ಒಬ್ಬರಿಗೆ ಪತ್ರ ಬರೆದು ಅವರ ಕೈಲಿ ರಾಜೇಂದ್ರಬಾಬು ಕೊಟ್ಟರು. ಆದರೆ ರೈಲು ಹತ್ತಿದಾಗಲೇ ಕೃಪಲಾನಿಯವರನ್ನು ಪೋಲೀಸಿನವರು ಬಂಧಿಸಿದರು. ತಮ್ಮ ಬಳಿಯಲ್ಲಿದ್ದ ಕಾಗದವನ್ನು ಅವರು ಹರಿದು ಚೂರುಮಾಡಿದರು. ಆ ಚೂರುಗಳಿಂದಲೇ ಮತ್ತೆ ಕಾಗದವನ್ನು ಪೋಲೀಸ್ ಅಧಿಕಾರಿಗಳು ಸಿದ್ಧಗೊಳಿಸಿದರು. ಕೃಪಲಾನಿಯವರ ಮೇಲೆ ಮೊಕದ್ದಮೆ ಹೂಡಿದರು. ಆ ಮೊಕದ್ದಮೆಯನ್ನು ನೋಡಲು ಹೋಗಿದ್ದಾಗ ಅಲ್ಲಿಯೇ ರಾಜೇಂದ್ರಬಾಬುವನ್ನು ದಸ್ತಗಿರಿಮಾಡಿದರು. ಅವರ ಮೇಲೂ ಮೊಕದ್ದಮೆಯಾಗಿ ಅವರಿಗೆ ೧೫ ತಿಂಗಳ ಶಿಕ್ಷೆಯಾಯಿತು. ಹಜಾರಿಬಾಗ್ ಜೈಲಿಗೆ ಅವರನ್ನು ಕಳಿಸಿದರು. ಜೈಲಿನಲ್ಲಿ ಇವರಿದ್ದಾಗಲೇ ಗಾಂಧೀಜಿಯವರು ೨೧ ದಿವಸಗಳ ಉಪವಾಸ ಮಾಡಿದರು. ಈ ಉಪವಾಸದನಂತರ ಗಾಂಧೀಜಿ ಹೊರಗಿದ್ದ ನಾಯಕರ ಸಭೆ ನಡೆಸಿದರು. ಈ ವೇಳೆಗೆ ಪಂಡಿತ ಜವಾಹರಲಾಲನೆಹರು ಬಿಡುಗಡೆ ಹೊಂದಿದ್ದರು, ಸತ್ಯಾಗ್ರಹ ಮುಂದುವರಿಯಿತು. ಮತ್ತೆ ದಸ್ತಗಿರಿಗಳಾದುವು. ಬಿಹಾರಿನಿಂದ ಆರೇಳುನೂರುಮಂದಿ ಮತ್ತೆ ದಸ್ತಗಿರಿಯಾಗಿ ಸೆರೆಮನೆಗೆ ಬಂದರು.

೧೯೩೪ರ ಜುಲೈ ತಿಂಗಳಲ್ಲಿ ಸೆರೆಮನೆಯಲ್ಲಿದ್ದಾಗಲೇ ರಾಜೇಂದ್ರಬಾಬು ಖಾಯಿಲೆಬಿದ್ದರು. ಮೊದಲಿನಿಂದಲೂ ಅವರಿಗೆ ಅಸ್ತಿಮಾ (Asthama) ದ ತೊಂದರೆ ಇತ್ತು. ಈಗ ಅದು ವಿಪರೀತಕ್ಕಿಟ್ಟುಕೊಂಡಿತು. ಕೆಮ್ಮು ಒಮ್ಮೊಮ್ಮೆ ಆರಂಭವಾದರೆ ಹಲವು ಗಂಟೆಗಳ ಕಾಲ ಬಿಡುತ್ತಿರಲಿಲ್ಲ. ದಿನಕ್ಕಿಪ್ಪತ್ತುಬಾರಿ ಭೇದಿಯೂ ಆರಂಭವಾಯಿತು. ವೈದ್ಯರು ಸೆರೆಮನೆಯಲ್ಲಿ ಇದರ ಚಿಕಿತ್ಸೆಯಾಗುವುದಿಲ್ಲ. ಪಾಟ್ನಾಕ್ಕೆ ಕಳಿಸಬೇಕೆಂದು ಸೂಚಿಸಿದರೂ ಸರ್ಕಾರದವರು ಅಸಡ್ಡೆ ತೋರಿದರು. ಮಹೇಂದ್ರಪ್ರಸಾದರಿಗೆ ಈ ಸುದ್ದಿ ತಿಳಿದೊಡನೆಯೇ ಬಹಳ ಗಾಬರಿಗೊಂಡರು. ಯಾರು ಯಾರನ್ನೋ ಕಂಡರು. ಕೊನೆಗೆ ರಾಜೇಂದ್ರಬಾಬುವಿಗೆ ಪ್ರಾಣಕ್ಕೇ ಅಪಾಯವಿದೆಯೆಂದು ಸರ್ಕಾರ

ಅವರನ್ನು ಹಜಾರಿಬಾಗ್ ಜೈಲಿನಿಂದ ಪಾಟ್ನಾಕ್ಕೆ ವರ್ಗಾಯಿಸಿತು— ಅದೂ ಅವರಿಗೆ ಪ್ರಾಣಾಪಾಯ ಒದಗಿದ ಎರಡು ತಿಂಗಳನಂತರ! ಪಾಟ್ನಾ ಆಸ್ಪತ್ರೆಯಲ್ಲಿ ವಿಶೇಷ ಕೋಣೆಯಲ್ಲಿ ರಾಜೇಂದ್ರಬಾಬು ಉಳಿದುಕೊಂಡರು. ಅಲ್ಲಿ ಅವರ ಜತೆಯಲ್ಲಿ ಅವರ ಪತ್ನಿಯೂ ನೌಕರನೂ ಇರುತ್ತಿದ್ದರು. ಹೊರಗಡೆ ಪೊಲೀಸ್ ಕಾವಲಂತೂ ಇದ್ದೇ ಇತ್ತು. ಕೊಂಚಕೊಂಚವಾಗಿ ಆರೋಗ್ಯ ಸುಧಾರಿಸಿತು. ಅಂದರೆ ಕಾಯಿಲೆ ಇನ್ನೂ ಪೂರ್ತಿವಾಸಿಯಾಗಲಿಲ್ಲ. ಉಗ್ರತೆ ಕಡಿಮೆ ಯಾಗಿರಲಿಲ್ಲ. ಅಷ್ಟರಲ್ಲೇ ಬಾಂಕೀಪುರಜೈಲಿಗೆ ಅವರನ್ನು ಸರ್ಕಾರ ದವರು ಕಳಿಸಿಬಿಟ್ಟರು. ಅವರೊಂದಿಗೆ ಬಹಳ ಜನ ಭೇಟಿಮಾಡಲು ಬರುತ್ತಾರೆಂದು ಯಾರೋ ಸರ್ಕಾರಕ್ಕೆ ಚಾಡಿ ಚುಚ್ಚಿದ್ದರು. ಬಾಂಕೀ ಪುರ ಜೈಲಿನಲ್ಲಿ ಆರೋಗ್ಯ ಇದ್ದಕ್ಕಿದ್ದಂತೆ ಕೆಟ್ಟಿತು. ಅಲ್ಲಿಯ ಸಿವಿಲ್ ಸರ್ಜನ್ ಎಷ್ಟೇ ಯತ್ನಿಸಿದರೂ ಏನೂ ಉಪಯೋಗವಾಗಲಿಲ್ಲ. ಪಾಟ್ನಾ ಆಸ್ಪತ್ರೆಯ ಡಾಕ್ಟರ್ ಬ್ಯಾನರ್ಜಿಯವರನ್ನು ಟೆಲಿಫೋನ್ ಮಾಡಿ ಕರೆಸಿಕೊಂಡರು. ಸಿವಿಲ್‌ಸರ್ಜನ್ ಸರ್ಕಾರದೊಂದಿಗೆ ಮಾತುಕತೆ ನಡೆಸಿದನಂತರ ರಾಜೇಂದ್ರಬಾಬುವನ್ನು ಮತ್ತೆ ಆಸ್ಪತ್ರೆಗೇ ಕಳಿಸಿದರು. ಈಗ ಆರೋಗ್ಯ ವಿಪರೀತ ಹದಗೆಟ್ಟಿತ್ತು. ಸುಸ್ತು ಹೆಚ್ಚಾಗಿ ಹೋಗಿತ್ತು. ನಾಲ್ಕೈದು ಗಂಟೆಗಳಿಗೊಮ್ಮೆ ಉಸಿರು ಸಿಕ್ಕಿ ಕೊಳ್ಳುತ್ತಿತ್ತು. ನವಂಬರ್ ಡಿಸೆಂಬರ್ ತಿಂಗಳು ಮೃತ್ಯು ಮುಖ ದಲ್ಲಿಯೇ ಕಳೆದಂತಾಯಿತು. ಸರ್ಕಾರದ ಆಜ್ಞೆಯಂತೆ ಮೆಡಿಕಲ್ ಬೋರ್ಡ್ ಬಂದು ಇವರನ್ನು ಪರೀಕ್ಷಿಸಿತು. ಈ ಬೋರ್ಡಿನ ಸದಸ್ಯರು ಡಾಕ್ಟರ್ ಬ್ಯಾನರ್ಜಿ, ಸಿವಿಲ್‌ಸರ್ಜನ್ ಮತ್ತಿನ್ನೊಬ್ಬರು. ಅವರು ರಾಜೇಂದ್ರಬಾಬುವನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಶಿಫಾರಸು ಮಾಡಿದರು. ಸರ್ಕಾರವೂ ಬಿಡುಗಡೆ ಮಾಡಲು ತೀರ್ಮಾ ನಿಸಿತು.

---

೮

# ಬಿಹಾರಿನ ಭೂಕಂಪ ಮತ್ತು ಸತ್ಯಾಗ್ರಹದ ಕೊನೆ

ಒಂದು ಸಂಜೆ ರಾಜೇಂದ್ರಬಾಬು ತಮ್ಮ ಮಂಚದ ಮೇಲಿದ್ದ ಹಾಸಿಗೆಯನ್ನು ಸರಿಪಡಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಮಂಚ ನಡುಗಿದಂತಾಯಿತು. ಆಕಡೆ ಕಿಟಕಿ, ಗೋಡೆಯೆಲ್ಲಾ ಅಲುಗಿದಂತೆ ತೋರಿತು. ತಮ್ಮ ಖಾಯಿಲೆಯಿಂದ ತಮಗೆ ಹಾಗೆ ಕಾಣಿಸುತ್ತಿದೆಯೆಂದು ಕೊಂಡರು. ಆದರೆ ಪಕ್ಕದ ಕೋಣೆಯಿಂದ ಅತ್ತಿಗೆ ಓಡಿಬಂದು ಭೂಮಿ ನಡುಗುತ್ತಿದೆಯೆಂದು ಕೂಗಿಕೊಂಡರು. ಕೂಡಲೇ ಆಸ್ಪತ್ರೆಯಿಂದ ಹೊರಗೆ ಹೋಗಿ ಬಯಲಿನಲ್ಲಿ ನಿಂತರು ಆಗ ಸುಮಾರು ನಾಲ್ಕೈದು ನಿಮಿಷಗಳ ಕಾಲ ಭೂಕಂಪವಾಯಿತು. ಅಂದು ರಾತ್ರಿ ಮತ್ತು ಮಾರನೆಯ ಬೆಳಿಗ್ಗೆ ಮತ್ತೆರಡುಬಾರಿ ಭೂಕಂಪವಾಯಿತು. ಈ ಭೂಕಂಪದ ಅನಾಹುತ ಎಷ್ಟಾಗಿದೆಯೋ ಎಂದು ರಾಜೇಂದ್ರಬಾಬುವಿಗೆ ಯೋಚನೆಯಾಯಿತು. ಮನೆಮಠಗಳು ಉರುಳಿ ಜನರು ಜೀವಂತವಾಗಿ ಹೂತುಹೋಗಿದ್ದರು. ಮನೆಯಲ್ಲಿದ್ದುದೆಲ್ಲ ಹಾಳಾಗಿದ್ದುವು. ತಿನ್ನಲು ತಿನಿಸಿಲ್ಲ. ಇರಲು ಮನೆಯಿಲ್ಲ. ಇದರ ಜತೆಗೆ ಭಾವಿಗಳು ಕೆರೆಗಳೆಲ್ಲ ಇರಲೇ ಇಲ್ಲವೋ ಎಂಬಂತೆ ಮುಚ್ಚಿಹೋಗಿದ್ದುವು. ರಾಜೇಂದ್ರಬಾಬುವನ್ನು ಎರಡುದಿನಗಳನಂತರ ಸರ್ಕಾರದವರು ಬಿಡುಗಡೆ ಮಾಡಿದರು. ಕೂಡಲೇ ರಾಜೇಂದ್ರಬಾಬು ಬಿಹಾರಿನ ಭೂಕಂಪದಿಂದ ಪೀಡಿತರಿಗೆ ಸಹಾಯಕೊಡಲು ಸಹಾಯ ಸಮಿತಿಯನ್ನು ರಚಿಸಿದರು. ಈ ಕಾಲದಲ್ಲಿ ಸರ್ಕಾರ ಕೂಡ ಬಿಹಾರಿನ ಸತ್ಯಾಗ್ರಹಿಗಳನ್ನು ಬಿಡುಗಡೆ ಮಾಡಿತು. ಸರ್ಕಾರವೂ ತನ್ನದೇ ಭೂಕಂಪ ಪರಿಹಾರ ಸಮಿತಿಯನ್ನು ರಚಿಸಿತು. ರಾಜೇಂದ್ರಬಾಬುವಿಗೆ ಸರ್ಕಾರ ಪೀಡಿತರಿಗೆ ಪರಿಹಾರ ನೀಡುವುದರಲ್ಲಿ ಬಹಳ ಸಹಾಯ ಮಾಡಿತು. ಎಲ್ಲಾ ಸ್ಥಳಗಳ ಸ್ಥಿತಿಗತಿಯನ್ನರಿಯುವುದೇ ಕಷ್ಟವಾಗಿತ್ತು. ರಸ್ತೆಗಳು ಅಲ್ಲಲ್ಲೇ ಕಂದಕಗಳಾಗಿದ್ದುವು. ರೈಲು ಹೋಗು

ವಂತಿರಲಿಲ್ಲ. ತಂತಿಸಮಾಚಾರ ಕಳಿಸುವಂತೆಯೂ ಇರಲಿಲ್ಲ. ಅಂತ ಹುದರಲ್ಲಿಯೂ ಸ್ವಯಂಸೇವಕರು ಊರೂರಿಗೆ ನಡೆದು ಹೋಗುತ್ತಿದ್ದರು. ಅವರಿಗೆ ಕೆಲವರಿಗೆ ಸೈಕಲ್ಲುಗಳನ್ನು ಕೊಡಿಸಿದರು. ರಾಜೇಂದ್ರಬಾಬುವಿಗೆ ಎಲ್ಲೆಲ್ಲಿಂದಲೂ ನೆರವು ಬರಲಾರಂಭವಾಯಿತು. ಬಿಹಾರ್ ಸಹಾಯಸಮಿತಿಯನ್ನು ಸ್ಥಾಪಿಸಿ ಅದನ್ನು ನಡೆಸಿಕೊಂಡು ಬಂದ ಶ್ರೇಯಸ್ಸು ಅವರದು. ಕಾಯಿಲೆಯಿಂದ ಇನ್ನೂ ಆಗತಾನೇ ಎದ್ದಿದ್ದರೂ ತಮ್ಮ ಜೀವನವನ್ನೇ ಈ ಪರಿಹಾರ ಸಮಿತಿಗೆ ಬಳುವಳಿ ಕೊಟ್ಟರು. ಗಾಂಧೀಜಿಯವರನ್ನು ಕರೆಸಿಕೊಂಡರು. ಹೊರದೇಶಗಳಿಂದ ಸ್ವಯಂಸೇವಕರು ತಾವಾಗಿಯೇ ಬಂದು ಸಹಾಯಮಾಡಲಾರಂಭಿಸಿದರು. ಹಣದ ರೂಪವಾಗಿ, ಬಟ್ಟೆಬರೆಗಳ ರೂಪವಾಗಿ ಸಹಾಯ ತುಂಬಿಬಂತು. ಸಮಸ್ಯೆಗಳು ಹಲವಾರು ಮನೆಮಠಗಳು ನಾಶವಾಗಿದ್ದುವು. ಅವುಗಳಲ್ಲಿದ್ದ ಊಟ ಉಡಿಗೆ ಎಲ್ಲ ಹೋಗಿತ್ತು, ಇದರಿಂದ ಜನರಿಗೆ ಇರಲು ಎಡೆಯಿಲ್ಲ ಮತ್ತು ತಿನ್ನಲು, ಉಡಲು ಇರಲಿಲ್ಲ. ಈಗ ಅವರನ್ನು ಮನೆ ಕಟ್ಟಿಕೊಳ್ಳಲು ಹೇಳಿ ಪ್ರೋತ್ಸಾಹಿಸುವುದೇ? ಅವರಿಗೆ ಯಾವಬಗೆಯ ಸಹಾಯನೀಡುವುದು? ಅಷ್ಟೊಂದು ದುಡ್ಡು ಎಲ್ಲಿಂದ ತರುವುದು ? ಮುಂದಿನ ಪ್ರಶ್ನೆ ಊಟದ್ದು. ಆದರೆ ಇದೆಲ್ಲಕ್ಕೂ ಮಿಗಿಲಾದ ಪ್ರಶ್ನೆ ನೀರಿನದು. ನಾಲೆಗಳು, ಭಾವಿಗಳು, ಮತ್ತು ಕೊಳಗಳೆಲ್ಲ ಭೂಕಂಪದ ಫಲವಾಗಿ ಮುಚ್ಚಿಹೋಗಿದ್ದುವು. ಕುಡಿಯಲು ನೀರೇ ಇಲಿಲ್ಲ ಈ ಸಮಸ್ಯೆಯನ್ನು ಪರಿಹರಿಸಲು ಕೂಡಲೇ ಎಲ್ಲಾ ಕಡೆಗಳಲ್ಲಿಯೂ ಭಾವಿಗಳನ್ನು ತೋಡಿಸುವ ಏರ್ಪಾಡು ಮಾಡಿದವರು ರಾಜೇಂದ್ರಬಾಬು. ಹಳ್ಳಿಗಳ ಜಮೀನುಗಳೆಲ್ಲ ಭೂಕಂಪದ ಫಲವಾಗಿ ಮರಳಿನಿಂದ ತುಂಬಿಹೋಗಿ ಮರುಭೂಮಿಯಾಗಿದ್ದುವು. ಈಗ ಅಲ್ಲಿ ಬೆಳೆಯಲು ಸಾಧ್ಯವಿಲ್ಲ. ಬೆಳೆಯದಿದ್ದರೆ ಖಂಡಿತವಾಗಿಯೂ ಕ್ಷಾಮ ಬಂದೇ ತೀರುವುದು. ಆದರೆ ಒಂದೊಂದು ಕಡೆಯೂ ಮರಳು ೫-೬ ಅಡಿಗಳಷ್ಟು ಬಿದ್ದಿತ್ತು. ಅದನ್ನು ತೆಗೆಸಲು ಖರ್ಚು ವಿಪರೀತವೇ ಆಗುತ್ತಿತ್ತು. ಕಾಲವೂ ಬಹಳವೇ ಆಗುತ್ತಿತ್ತು. ಕೊನೆಗೆ ಬಹಳ ಕಷ್ಟದಿಂದ ಆ ಕೆಲಸವನ್ನೂ ಮಾಡಿದರು. ಜಮೀನಿಗೆ ಸಾಗುವಳಿಗಾಗು

ವಂತೆ ಭಾವಿಗಳನ್ನು ತೋಡಿಸಿಕೊಟ್ಟರು. ಅಲ್ಲದೆ ಅಲ್ಲಿಯ ಕಾರ್ಖಾನೆ ಗಳು ನಾಶವಾದ್ದರಿಂದ ಸಕ್ಕರೆಗೆಂದು ಬೆಳೆಸಿದ್ದ ಕೋಟಿಗಟ್ಟಲೆ ಟನ್ನಿನಷ್ಟು ಕಬ್ಬಿನ ಬೆಳೆ ಹಾಳಾಗುತ್ತಿತ್ತು. ಅವರೆಲ್ಲರೂ ತಾವೇ ಬೆಲ್ಲಮಾಡುವಂತೆ ಏರ್ಪಾಡುಮಾಡಿದರು. ಅದೂ ಬೆಲ್ಲಮಾಡುವ ಕಡಾಯಿಗಳನ್ನು ಸಾಮಾನುಗಳನ್ನು ಉಳಿದ ಪ್ರಾಂತಗಳಿಂದ ತರಿಸಿಕೊಡಬೇಕಾಯಿತು. ಮನೆಗಳನ್ನು ಕಟ್ಟಿಕೊಳ್ಳಲು ಅವರಿಗೆ ಸುಲಭ ಬೆಲೆಗೆ ಸಾಮಾನು ಸಿಗುವಂತೆ ಅಂಗಡಿಗಳನ್ನು ತೆರೆದರು. ಅಲ್ಲದೆ ಪ್ರತಿಯೊಬ್ಬರಿಗೂ ೨೫೦ ರೂಪಾಯಿ ನಗದು ಸಹಾಯ ಕೊಟ್ಟರು. ಸ್ವಯಂಸೇವಕರು ಒಂದು ಕಡೆಯಿಂದ ಒಂದು ಕಡೆಗೆ ಹೋಗಿ ಕೆಲಸದಲ್ಲಿ ನೆರವಾಗುತ್ತಿದ್ದರು. ಈ ಕಾಲದಲ್ಲೂ ಕೆಲವರು ತಮ್ಮಲ್ಲಿದ್ದ ಅಕ್ಕಿಯನ್ನು ಬಚ್ಚಿಟ್ಟುಕೊಂಡು ಅದರ ಬೆಲೆಯನ್ನು ಏರಿಸಿದರು. ಕೂಡಲೇ ರಾಜೇಂದ್ರಬಾಬು ಬರ್ಮಾದಿಂದ ಅಕ್ಕಿ ತರಿಸಿ ಜನಕ್ಕೆ ಹಂಚುವ ಕಾರ್ಯಕ್ರಮ ಕೈಕೊಂಡರು. ಒಂದು ಜಿಲ್ಲೆಯಲ್ಲಿ ನಾಲೆಯೊಂದು ಮುಚ್ಚಿಹೋದ್ದರಿಂದ ಅರ್ಧಕರ್ಧ ನೀರಿನಲ್ಲಿ ಮುಳುಗಿಹೋಗಿತ್ತು. ಅಲ್ಲಿಗೆ ಹೋಗಿ ಸ್ವಯಂ ಸೇವಕರು ನಾಲೆಯನ್ನು ತಿರುಗಿ ತೋಡಿ ಆ ನೆಲವನ್ನೆಲ್ಲ ಸಾಗುವಳಿಗೆ ಬರುವಂತೆ ಮಾಡಿದರು. ಇಷ್ಟೆಲ್ಲ ಕೆಲಸ ಮಾಡುತ್ತಿದ್ದ ಸ್ವಯಂಸೇವಕರೆಲ್ಲರಿಗೂ ಸಿಗುತ್ತಿದ್ದುದು ದಿನದ ಊಟಕ್ಕೆ ಮಾತ್ರ. ರಾಜೇಂದ್ರಬಾಬುವೂ ಉಳಿದ ಸ್ವಯಂಸೇವಕರೊಂದಿಗೆ ಹೊರಗೆ ಕೆಲಸ ಮಾಡಿ ಬಂದು ಪರಿಹಾರ ಸಮಿತಿಯ ಕಚೇರಿಯ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದರು. ಭೂಕಂಪದ ಹಿಂದೆಯೇ ನದಿಗಳಲ್ಲಿ ಪ್ರವಾಹ ಹೆಚ್ಚಿ ನೆರೆ ಬಂದಿತು, ಇದರಿಂದ ಎಲ್ಲಾ ಕಡೆಯಲ್ಲಿಯೂ ಹಾಹಾಕಾರ ಹೆಚ್ಚಿತು. ಜೊತೆಗೆ ಮಲೇರಿಯ ಮತ್ತು ಪ್ಲೇಗುಗಳ ಹಾವಳಿಯು ಆರಂಭವಾಯಿತು. ಪರಿಹಾರ ಸಮಿತಿಯ ವೈದ್ಯರು ಡಾಕ್ಟರ್ ಬ್ಯಾನರ್ಜಿಯವರ ನೇತೃತ್ವದಲ್ಲಿ ಎಲ್ಲಾ ಕಡೆಯಲ್ಲಿಯೂ ಚಿಕಿತ್ಸೆಯನ್ನು ನಡೆಸಿದರು. ಭೂಕಂಪದ ಹಾವಳಿ ವಿಪರೀತವಾಗಿತ್ತು. ದೊಡ್ಡದೊಡ್ಡ ಬಂಗಲೆಗಳು ನಾಶವಾಗಲು ಅದರ ಮಾಲೀಕರು ಬಂದು ಮತ್ತೆ ಮನೆ ಕಟ್ಟಿಕೊಳ್ಳಲು ಹಣ ಕೇಳು

ತ್ತಿದ್ದರು. ಆದರೆ ಅದು ಸಾಧ್ಯವಾಗುತ್ತಿರಲಿಲ್ಲ. ಅಂತಹ ದೊಡ್ಡವರು ಪರಿಹಾರ ಸಮಿತಿಯನ್ನು ಬೈದುಕೊಂಡು ಸರ್ಕಾರದ ಬಳಿಗೆ ಹೋಗಿ ಅಲ್ಲಿ ಪರಿಹಾರ ಪಡೆಯುತ್ತಿದ್ದರು. ಬಡವರಾಗಲಿ, ಯಾರೇ ಆಗಲಿ ಮನೆಕಟ್ಟಿಕೊಳ್ಳಲು ೨೫೦ ರೂಪಾಯಿ ನಗದು ಹಣ, ಸುಲಭ ಬೆಲೆ ಯಲ್ಲಿ ಸಾಮಾನುಗಳನ್ನು ಸಮಿತಿ ಒದಗಿಸುತ್ತಿತ್ತು. ಮನೆಕಟ್ಟಲು ಇಂಜನಿಯರುಗಳು ಸಮಿತಿಯ ಪರವಾಗಿ ಕೆಲಸ ಮಾಡುತ್ತಿದ್ದರು. ಹೊಲಗಳಲ್ಲಿ ಉಳುವ ಕೆಲಸಕ್ಕೆ ಕೂಡ ಸ್ವಯಂ ಸೇವಕರು ಹೋಗು ತ್ತಿದ್ದರು. ಕೆಲಸವಿಲ್ಲದೆ, ಚಿಂತಾಮಗ್ನರಾಗಿದ್ದ ಸ್ತ್ರೀಯರಿಗೆ ಚರಕಾ ಗಳನ್ನು ಕೊಟ್ಟು ಅವರಿಂದ ನೂಲು ತೆಗೆಸಿ ಮಾರಿ ಹಣಕೊಡುವ ಕೆಲಸವನ್ನು ಸಮಿತಿ ಮಾಡಿತು. ಸಮಿತಿಯ ಕೆಲಸವನ್ನು ಸರ್ಕಾರ ಸಂದೇಹ ದೃಷ್ಟಿಯಿಂದಲೇ ನೋಡುತ್ತಿತ್ತು. ಸರ್ಕಾರ ಕೊನೆಗೆ ಸಮಿತಿ ಹಣವನ್ನು ಅತಿಯಾಗಿ ಖರ್ಚುಮಾಡಿತೆಂದೂ ಹೇಳಿತು. ಆದರೆ ಸಮಿ ತಿಯ ಬಳಿಗೆ ಜನರು ಪರಿಹಾರಕ್ಕೆ ಬರುತ್ತಿದ್ದರೇ ಹೊರತು ಸರ್ಕಾರದ ಬಳಿಗಲ್ಲ. ದೇಶದೇಶಗಳಿಂದ ಪ್ರತಿ ದಿನವೂ ಸುಮಾರು ಸಾವಿರಗಟ್ಟಲೆ ಹಣ ಬರುತ್ತಿತ್ತು. ಸರ್ಕಾರದ ಅಪ ಪ್ರಚಾರವಾದರೂ ಸಮಿತಿಗೆ ಸ್ವಿಟ್ಸರ್ಲೆಂಡಿನಿಂದ ಇಂಗ್ಲೆಂಡಿನಿಂದ ಪ್ರತಿದಿನವೂ ನೆರವು ಬರು ತ್ತಿತ್ತು. ಜನರೂ ಅಲ್ಲಿಂದ ಸ್ವಯಂಸೇವಕರಾಗಿ ಬಂದು ಬಿಹಾರಿನಲ್ಲಿ ಕೆಲಸಮಾಡಿದರು. ಆ ವರುಷದ ಕೊನೆಯೊಳಗಾಗಿ ಭೂಕಂಪದ ಅನಾಹುತಗಳನ್ನೆಲ್ಲ ಪರಿಹಾರ ಮಾಡಿದುದು, ಪರಿಹಾರಸಮಿತಿಯ ಕಾರ್ಯ ತತ್ಪರತೆಯ ಗುರುತು, ರಾಜೇಂದ್ರಬಾಬುವಿನ ಸೇವಾ ದೀಕ್ಷೆಯಫಲ.

೧೯೩೩ರ ವೇಳೆಗೆ ಸತ್ಯಾಗ್ರಹದ ಬಿರುಸು ಕಡಿಮೆಯಾಗಿತ್ತು. ಈಗ ಭೂಕಂಪದ ಅವಾಂತರವೂ ಆದುದರಿಂದ ಗಾಂಧೀಜಿ ಸತ್ಯಾಗ್ರಹ ವನ್ನು ನಿಲ್ಲಿಸಿದರು. ಸರ್ಕಾರವೂ ಈ ಬಾರಿ ಬೇಗನೇ ತನ್ನ ನಿಯಂ ತ್ರಣಗಳನ್ನೆಲ್ಲಾ ಹಿಂದಕ್ಕೆ ತೆಗೆದುಕೊಂಡಿತು. ಕಾಂಗ್ರೆಸ್ ಆಶ್ರಮ ಗಳನ್ನೂ, ಮನೆಗಳನ್ನೂ ಕೂಡಲೇ ಬಿಟ್ಟುಕೊಟ್ಟಿತು. ಸತ್ಯಾಗ್ರಹಿ ಗಳನ್ನು ಬಿಡುಗಡೆ ಮಾಡಿತು. ೧೯೩೪ರಲ್ಲಿ ಮುಂಬಯಿಯಲ್ಲಿ

ಕಾಂಗ್ರೆಸ್ ಅಧಿವೇಶನದ ಏರ್ಪಾಡಾಯಿತು. ಬಿಹಾರಿನ ಭೂಕಂಪದಲ್ಲಿ ಸೇವೆಮಾಡಿದುದರ ಬಗ್ಗೆ ದೇಶ ತನ್ನ ಕೃತಜ್ಞತೆ ತೋರಿಸಲು ರಾಜೇಂದ್ರಬಾಬುವನ್ನೇ ಅಧ್ಯಕ್ಷರನ್ನಾಗಿ ಮಾಡಿತು. ರಾಜೇಂದ್ರ ಬಾಬು ಅದನ್ನೊಪ್ಪಿಕೊಳ್ಳಲು ಮೊದಲು ಹಿಂಜರಿದರೂ ಗಾಂಧೀಜಿ ಯವರ ಆಜ್ಞೆಯಂತೆ ಆ ಭಾರವನ್ನು ವಹಿಸಿಕೊಂಡರು.

ಕಾಂಗ್ರೆಸ್ ಅಧಿವೇಶನಕ್ಕೆ ಕೆಲಕಾಲ ಮೊದಲೇ ರಾಜೇಂದ್ರ ಬಾಬುವಿನ ಅಣ್ಣ ಮಹೇಂದ್ರಪ್ರಸಾದರು ತೀರಿಕೊಂಡರು. ಮಲೇ ರಿಯಾದಿಂದ ನರಳಿದ ಅವರ ಸ್ಥಿತಿ ಬಹಳ ವಿಷಮವಾದಾಗ ರಾಜೇಂದ್ರ ಬಾಬು ಹಳ್ಳಿಗೆ ಹೋದರು. ಎಷ್ಟೇ ಯತ್ನಿಸಿದರೂ ಅಣ್ಣನನ್ನು ಉಳಿಸಿ ಕೊಳ್ಳಲಾಗಲಿಲ್ಲ. ಅಣ್ಣನ ಸಾವಿನ ಜತೆಗೆ ದೊಡ್ಡ ಭಾರ ರಾಜೇಂದ್ರ ಬಾಬುವಿನ ಹೆಗಲಿನ ಮೇಲೆ ಬಿತ್ತು. ಅದು ಮನೆಯ ಸಾಲ! ಅಣ್ಣನೇ ಮನೆಯ ವಿಚಾರವನ್ನೆಲ್ಲಾ ನೋಡಿಕೊಳ್ಳುತ್ತಿದ್ದುದು. ಮನೆಗೆ ಸಾಕಾ ಗುವಷ್ಟು ಆದಾಯ ತರುವ ಜಮೀನುದಾರಿಯಿತ್ತು. ಆದರೂ ಅದನ್ನು ಸರಿಯಾಗಿ ನೋಡಿಕೊಳ್ಳುವವರಿರಲಿಲ್ಲ. ಮಹೇಂದ್ರಪ್ರಸಾದರು ಎಲ್ಲದ ರಲ್ಲಿಯೂ ಕೈ ಹಾಕಿ ಕೈ ಸುಟ್ಟುಕೊಂಡಿದ್ದರು. ಮನೆಗಾಗಿ ಸಾಲ ಮಾಡಿದುದೇ ಅಲ್ಲದೆ ಒಂದು ರೈಸ್‌ಮಿಲ್ ತೆರೆದರು. ಅಲ್ಲಿ ಕೊಂಡ ಬೆಲೆಗಿಂತ ಕಡಿಮೆ ಬೆಲೆಗೆ ಅಕ್ಕಿಯನ್ನು ಮಾರಿ ಸಾವಿರಾರು ರೂಪಾಯಿ ನಷ್ಟಮಾಡಿಕೊಂಡರು. ಅನಂತರ ಛಪರಾಕ್ಕೆ ವಿದ್ಯುಚ್ಛಕ್ತಿ ಸರಪ ರಾಜು ಮಾಡಲು ಸಂಸ್ಥೆ ತೆರೆದು ಅಲ್ಲಿಯೂ ನಷ್ಟಮಾಡಿಕೊಂಡರು. ಆದರೆ ಈ ನಷ್ಟದ ಜತೆಗೆ ಆ ವ್ಯಾಪಾರಗಳನ್ನು ಮಾಡಲು ತೆರೆದ ಸಾಲವೂ ಸೇರಿತು. ಹೀಗಾಗಿ ಸುಮಾರು ಒಂದು ಒಂದೂವರೆ ಲಕ್ಷ ರೂಪಾಯಿನಷ್ಟು ಸಾಲದ ಹೊರೆ ರಾಜೇಂದ್ರಬಾಬುವಿನ ಹೆಗಲಿಗೆ ಬಿತ್ತು. ಜಮೀನನ್ನೆಲ್ಲಾ ಮಾರಿದರೂ ಅಷ್ಟು ಹಣ ಏಳುತ್ತಿರಲಿಲ್ಲ. ಮನೆಯನ್ನು ಮಾರಲು ಇಷ್ಟವಿರಲಿಲ್ಲ. ಕೊನೆಗೆ ಗಾಂಧೀಜಿಯ ಹೇಳಿಕೆ ಯಂತೆ ಸೇಠ್ ಜಮನಾಲಾಲ್ ಬಜಾಜರು ಆ ಸಾಲಗಳ ಲೆಕ್ಕ ನೋಡಿ ಜಮೀನನ್ನು ತಾವು ಒತ್ತೆಯಾಗಿಟ್ಟುಕೊಂಡು ನಗದು ಸಾಲ ವನ್ನೆಲ್ಲಾ ತೀರಿಸಿದರು.

ಜಮೀನು ರಾಜೇಂದ್ರಬಾಬುವಿನ ಮನೆಯವರ ಬಳಿಯೇ ಉಳಿಯಿತು. ಸಾಲ ತೀರಿತು, ಮನೆಯ ಮಾನ ಉಳಿಯಿತು, ರಾಜೇಂದ್ರಬಾಬುವಿನ ಮಕ್ಕಳು ಬಜಾಜರಿಗೆ ಪ್ರತಿವರ್ಷವೂ ಅವರು ಆಗ ಕೊಟ್ಟ ಸಾಲದ ಹಣ ತೀರಿಸುತ್ತಾ ಬಂದರು. ಅದೂ ೧೯೪೪ರಲ್ಲಿ ಪೂರ್ಣವಾಗಿ ತೀರಿತು! ಅಂತೂ ಬಾಬುರಾಜೇಂದ್ರರ ಮೇಲಿದ್ದ ಹೊರೆ ಇಳಿದುದರಿಂದ ಈಗ ಅವರು ನಿರಾತಂಕವಾಗಿ ಮುಂಬಯಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಲು ಅನುವಾಯಿತು. ಕಾಂಗ್ರೆಸ್ ಇನ್ನೂ ಹೆಚ್ಚು ಶಕ್ತಿಯುತವಾಗಿದೆಯೆಂದು ತೋರಲು ಮುಂಬಯಿ ಅಧಿವೇಶನ ಅದ್ಧೂರಿಯಾಗಿಯೇ ನಡೆಯಿತು. ಕಾಂಗ್ರೆಸ್ ಅಧಿವೇಶನಕ್ಕೆ ಕೊಂಚ ಮೊದಲು ಗಾಂಧೀಜಿ ತಾವು ಕಾಂಗ್ರೆಸ್ಸಿನಿಂದ ಹೊರಗಿರುವುದಾಗಿಯೂ, ಆದರೆ ಯಾವಾಗಲೂ ಕಾಂಗ್ರೆಸ್ಸಿಗೆ ಸೇವೆ ಮಾಡಲು ಸಿದ್ಧವಾಗಿರುವುದಾಗಿಯೂ ಹೇಳಿದರು. ಇದು ದೇಶದ ಹಿತಕ್ಕಾಗಿಯೇ ಕಾಂಗ್ರೆಸ್ಸಿನ ಹಿತಕ್ಕಾಗಿಯೇ ಎಂದು ರಾಜೇಂದ್ರಬಾಬುವಿಗೆ ಗೊತ್ತು. ಕಾಂಗ್ರೆಸ್ಸಿನಲ್ಲಿ ಹಿರಿಯನಾಯಕರಿರುವರು. ಆದರೆ ಅವರು ಗಾಂಧೀಜಿಯ ನೆರಳುಗಳಂತೆ ಜನರಿಗೆ ತೋರುವರು. ಈಗ ಗಾಂಧೀಜಿ ಕಾಂಗ್ರೆಸ್ಸಿನಿಂದ ಹೊರಗೆ ನಿಂತರೆ ಆಗ ಈ ನಾಯಕರೇ ಕೆಲಸ ಮಾಡಿ ಜನಕ್ಕೆ ಸಂಸ್ಥೆಯಲ್ಲಿ ಇನ್ನೂ ಅನುರಾಗ ಹೆಚ್ಚುವುದು ಎಂದು ಗಾಂಧೀಜಿ ಮತ್ತು ರಾಜೇಂದ್ರಬಾಬು ಇಬ್ಬರ ಯೋಚನೆ. ಈ ವರ್ಷವೇ ಸತ್ಯಾಗ್ರಹ ನಿಲ್ಲಿಸಿ ಹೊಸ ರೀತಿಯಂತೆ ನಡೆಯುವ ಕೌನ್ಸಿಲ್ ಚುನಾವಣೆಗಳಲ್ಲಿ ಭಾಗವಹಿಸಬೇಕೆಂಬ ಸೂಚನೆ ಬಂದುದೂ. ಕಾಂಗ್ರೆಸ್ಸಿನೊಳಗೆ ತೀವ್ರವಾದಿಗಳು ಕಾಂಗ್ರೆಸ್ ಸೋಷಿಯಲಿಸ್ಟ್ ಪಕ್ಷವನ್ನು ಸ್ಥಾಪಿಸಿದುದೂ ಈಗಲೇ! ಈ ಅಧಿವೇಶನದಲ್ಲಿಯೇ ಕಾಂಗ್ರೆಸ್ಸಿನ ಹೊಸ ಸಂಘಟನೆಯೂ ಆದುದು! ಚುನಾವಣೆಗಳಲ್ಲಿ ಭಾಗವಹಿಸಬೇಕೆಂಬ ತೀರ್ಮಾನವೂ ಆಯಿತು. ಕಾಂಗ್ರೆಸಿನ ಲೋಕಪ್ರಿಯತೆ ಸರ್ಕಾರಕ್ಕೆ ಸತ್ಯಾಗ್ರಹದಿಂದ ಮತ್ತು ಬಿಹಾರಿ ಪರಿಹಾರದ ಕೆಲಸದಿಂದ ಗೊತ್ತಾಗಿತ್ತು. ಈಗ ಈ ಚುನಾವಣೆಗಳಲ್ಲಿ ಜಯಗಳಿಸಿದರೆ ಪೂರ್ಣವಾಗಿ ತಿಳಿದೀತೆಂದು ಎಲ್ಲರ ಯೋಚನೆ. ಅಂತೆಯೇ ಎಲ್ಲರಿಗೂ ಉತ್ಸಾಹ ಉಕ್ಕಿ

ಹರಿಯುತ್ತಿತ್ತು. ರಾಜೇಂದ್ರಬಾಬುವಿನ ಆರೋಗ್ಯ ಮತ್ತೆ ಹದಗೆಟ್ಟು ದರಿಂದ ಅವರು ಈ ಚುನಾವಣೆಯ ಕಾರ್ಯದಲ್ಲಿ ಭಾಗವಹಿಸಲಾಗ ಲಿಲ್ಲ. ಎಲ್ಲಾ ಕಡೆಯಲ್ಲಿ ಕಾಂಗ್ರೆಸ್ಸಿಗೆ ಜಯ ಆಯಿತು. ಬಹುಮತದ ಸಂಖ್ಯೆಯಲ್ಲಿ ಎಲ್ಲಾ ಪ್ರಾಂತಗಳಿಂದಲೂ ಕಾಂಗ್ರೆಸ್ ಉಮೇದು ವಾರರೇ ಕೇಂದ್ರ ಅಸೆಂಬ್ಲಿಗೆ ಚುನಾಯಿತರಾಗಿ ಬಂದರು. ನಾಲ್ಕು ವರ್ಷಗಳ ಅವ್ಯಾಹತ ಸತ್ಯಾಗ್ರಹದ ಕಾರಣ ಕಾಂಗ್ರೆಸ್ಸಿನ ಶಿಸ್ತು ಎಲ್ಲಾ ಕಡೆಯಲ್ಲಿಯೂ ಶಿಥಿಲವಾಗಿತ್ತು. ಅದನ್ನು ಮತ್ತೆ ಕೂಡಿಸಲು ರಾಜೇಂದ್ರಬಾಬು ದೇಶವನ್ನೆಲ್ಲಾ ಸುತ್ತಿಬಂದರು. ಎಲ್ಲಾ ಕಡೆ ಗಳಲ್ಲಿಯೂ ಅಭೂತಪೂರ್ವ ಸ್ವಾಗತ ಸಿಕ್ಕಿತು. ಕಾಂಗ್ರೆಸ್ ಸಂಸ್ಥೆ ಜನಗಳದಾಯಿತು. ಭದ್ರವಾಯಿತು. ಮುಸ್ಲಿಂ ಲೀಗಿನ ಅಧ್ಯಕ್ಷ ಜಿನ್ನಾರವರೊಂದಿಗೆ ಮಾತುಕತೆ ನಡೆದುದೂ ಈಗಲೇ. ಆದರೆ ಈ ಮಾತುಕತೆ ವಿಫಲವಾಯಿತು. ಹಿಂದೂ ಮುಸ್ಲಿಂ ಸಮಸ್ಯೆ ಮೊದಲಿ ನಿಂದಲೂ ರಾಜೇಂದ್ರಬಾಬುವಿನ ಮನಸ್ಸನ್ನು ಆಕ್ರಮಿಸಿತ್ತು. ಈಗ ಅವರು ಕಾಂಗ್ರೆಸ್ಸಿನ ಅಧ್ಯಕ್ಷರಾದಾಗ ಜಿನ್ನಾರವರ ಜತೆ ಸೇರಿ ಹಿಂದೂ ಮುಸ್ಲಿಂ ಐಕ್ಯ ಸಾಧಿಸುವ ಯೋಚನೆ ಮಾಡಿದರು. ಆದರೆ ಪ್ರಯೋಜನವಾಗಲಿಲ್ಲ. ಈ ಸಮಸ್ಯೆ ಬರಬರುತ್ತಾ ಏರಿತು. ೧೯೪೦ರಲ್ಲಿ ಪಾಕೀಸ್ತಾನವೇ ತಮ್ಮ ಧ್ಯೇಯವೆಂದು ಮುಸ್ಲಿಂಲೀಗ್ ಘೋಷಿಸಿ ದಾಗ ರಾಜೇಂದ್ರಬಾಬು ನೊಂದಷ್ಟು ಮತ್ತಾರೂ ಸಂಕಟಪಡಲಿಲ್ಲ. ಅದಾದಮೇಲೆಯೇ ೧೯೪೩ ರಲ್ಲಿ ರಾಜೇಂದ್ರಬಾಬು ಸೆರೆಮನೆಯಲ್ಲಿ ದ್ದಾಗ ಈ ಬಗ್ಗೆ 'ಒಡೆದ ಭಾರತ' (India Divided) ಎಂಬ ಪುಸ್ತಕ ಬರೆದು ಹೇಗೆ ಪಾಕೀಸ್ತಾನದ ಪ್ರಶ್ನೆ ದೇಶಕ್ಕೆ ಕೆಡುಕು ತರು ವುದೆಂದು ಸೂಚಿಸಿದರು. ಅಂತೂ ಈಗ ಯಾವ ಬಗೆಯಲ್ಲೂ ಜಿನ್ನಾ ರವರು ರಾಜೇಂದ್ರಬಾಬುವಿನೊಂದಿಗೆ ರಾಜಿಯಾಗಲಿಲ್ಲ.

---

೯

# ಬಿಡುಗಡೆಯ ಹಾದಿಯಲ್ಲಿ

೧೯೩೦ ರಲ್ಲಿ ಆರಂಭವಾದ ಸತ್ಯಾಗ್ರಹ, ಸಂಪೂರ್ಣ ಬಿಡುಗಡೆಗಾಗಿ, ಭಾರತ ಸಂಪೂರ್ಣವಾಗಿ ಸ್ವತಂತ್ರವಾಗುವತನಕ ಸತ್ಯಾಗ್ರಹ ಕೊನೆಯಾದ ಹಾಗೆಯೇ ಅಲ್ಲ. ಒಮ್ಮೊಮ್ಮೆ ತಾತ್ಕಾಲಿಕವಾಗಿ ನಿಲ್ಲಬಹುದು ಅಷ್ಟೇ. ಈ ಬಿಡುಗಡೆಯ ಹಾದಿಯಲ್ಲಿ ಕಾಂಗ್ರೆಸ್ ಹಲವು ರೀತಿಯಲ್ಲಿ ನಡೆಯಿತು. ಅದು ಕಾಂಗ್ರೆಸ್ಸಿನ ಇತಿಹಾಸ. ರಾಜೇಂದ್ರಬಾಬು ಈಗ ಸಂಪೂರ್ಣವಾಗಿ ಕಾಂಗ್ರೆಸ್ಸಿನಲ್ಲಿ ಐಕ್ಯವಾದರು. ಎಲ್ಲಾ ಹಿರಿಯ ನಾಯಕರಂತೆಯೇ ಅವರ ಕಥೆಯೂ ಕಾಂಗ್ರೆಸ್ಸಿನ ಕಥೆಯೇ ಆಯಿತು. ಕಾಂಗ್ರೆಸ್ಸು ತಾತ್ಕಾಲಿಕವಾಗಿ ಸತ್ಯಾಗ್ರಹ ನಿಲ್ಲಿಸಿತ್ತು. ಅಸೆಂಬ್ಲಿಯಲ್ಲಿ ಸ್ಪರ್ಧೆಯಿಂದ ಚುನಾಯಿತವಾಗಿ ಬಹುಮತಪಕ್ಷವಾಯಿತು. ೧೯೩೫ ರಲ್ಲಿ ಕಾಂಗ್ರೆಸ್ಸಿನ ೫೦ ನೆಯ ವರ್ಷದ ಜಯಂತಿ ನಡೆಯಿತು. ಪಟ್ಟಾಭಿ ಸೀತಾರಾಮಯ್ಯ ಕಾಂಗ್ರೆಸಿನ ಇತಿಹಾಸವನ್ನು ಬರೆದರು. ಕಾಂಗ್ರೆಸ್ಸು ಅದನ್ನು ಪ್ರಕಟಿಸಿತು. ದಕ್ಷಿಣ ಭಾರತವನ್ನೆಲ್ಲಾ ರಾಜೇಂದ್ರಬಾಬು ಸುತ್ತಿಬಂದರು. ಕಾಂಗ್ರೆಸ್ಸಿನ ಪ್ರಚಾರ ಕಾರ್ಯವೂ ಜೋರಾಗಿ ನಡೆಯಿತು. ಸುಧಾರಿತ ಕಾನೂನುಗಳನ್ನು ಸರ್ಕಾರ ಪ್ರಕಟಿಸಿತು. ಅದರಂತೆ ಪ್ರಾಂತಗಳಲ್ಲಿ ಕಾಂಗ್ರೆಸ್ಸು ಚುನಾವಣೆಯಲ್ಲಿ ಭಾಗವಹಿಸಿ ಮಂತ್ರಿಮಂಡಲವನ್ನು ರಚಿಸಬಹುದಾಗಿತ್ತು. ೧೯೩೭ ರ ಚುನಾವಣೆಗಳಲ್ಲಿ ಕಾಂಗ್ರೆಸ್ಸು ಭಾಗವಹಿಸಿತು. ಆದರೆ ಮಂತ್ರಿಮಂಡಲಿ ರಚಿಸುವುದೇ ಇಲ್ಲವೇ ಎಂದು ಇನ್ನೂ ತೀರ್ಮಾನವಾಗಿರಲಿಲ್ಲ. ರಾಜೇಂದ್ರಬಾಬು ಅದಕ್ಕೆ ವಿರುದ್ಧವಾಗಿದ್ದರು. ಆದರೆ ಕಾಂಗ್ರೆಸ್ ಮಂತ್ರಿಮಂಡಲಗಳನ್ನು ರಚಿಸಿದಾಗ ಅದರ ಮೇಲ್ವಿಚಾರಕರಾಗಿ ಕೆಲಸ ಮಾಡಿದರು. ಅನಂತರ ಯೂರೋಪಿನ ಮಹಾಯುದ್ಧ ಒದಗಿತು. ಆಗ ಕಾಂಗ್ರೆಸ್ ಬ್ರಿಟಿಷ್ ಸರ್ಕಾರವನ್ನು ಮತ್ತೆ ಒತ್ತಾಯಪಡಿಸಿತು. ಹಿಂದಿನಂತೆಯೇ ಈಗಲೂ

ಸರ್ಕಾರ ಇಬ್ಬಂದಿಯ ಮಾತುಗಳನ್ನಾಡುತ್ತಿತ್ತು. ಜನರ ಅಭಿಮತ ತೆಗೆದುಕೊಳ್ಳದೆಯೇ ಭಾರತವನ್ನು ಯುದ್ಧಕ್ಕಿಳಿಸಿತು. ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆ ಕೊಟ್ಟವು. ಕಾಂಗ್ರೆಸ್ಸಿನ ಮಂತ್ರಿ ಮಂಡಲಗಳು ರಚನಾತ್ಮಕ ಕಾರ್ಯಕ್ರಮವನ್ನು ಎಲ್ಲಾ ಕಡೆಯಲ್ಲಿಯೂ ಆರಂಭಿಸಿದ್ದುವು. ಹರಿಜನೋದ್ಧಾರ, ಖಾದೀಪ್ರಚಾರ, ಮದ್ಯಪಾನನಿರೋಧ, ರಾಜಕೀಯ ಬಂದಿಗಳ ಬಿಡುಗಡೆ, ರೈತರಿಗೂ ಜಮೀನ್ದಾರರಿಗೂ ಸವಿಸಂಬಂಧ ಇವುಗಳನ್ನು ಕಾಂಗ್ರೆಸ್ ಮಂತ್ರಿ ಮಂಡಲಗಳು ಜೋರಿನಿಂದ ನಡೆಸಿದ್ದುವು. ಆದರೂ ಆ ಕೆಲಸಗಳೆಲ್ಲ ಕೆಲವೇ ದಿನಗಳಲ್ಲಿ ಮುಗಿಯುವಂತಹವಲ್ಲ. ಆದ್ದರಿಂದ ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆಕೊಟ್ಟಾಗ ಆ ಕೆಲಸಗಳು ಮುಗಿದಿರಲಿಲ್ಲ. ಅನಂತರ ಬ್ರಿಟಿಷ್ ಸರ್ಕಾರ ಕಾಂಗ್ರೆಸ್ ಮಾಡಿದ್ದ ಕೆಲಸವನ್ನೆಲ್ಲಾ ಮಣ್ಣುಪಾಲು ಮಾಡಿತು. ಬ್ರಿಟಿಷ್ ಸರ್ಕಾರ ತನ್ನ ಯುದ್ಧದ ಉದ್ದೇಶವನ್ನು ನೇರವಾಗಿ ತಿಳಿಸಲಿ. ಭಾರತಕ್ಕೆ ಯುದ್ಧಾನಂತರ ಸ್ವಾತಂತ್ರ್ಯ ಕೊಡುವುದಾಗಿ ಘೋಷಿಸಲಿ ಎಂದಷ್ಟೇ ಕಾಂಗ್ರೆಸ್ಸಿನ ಕೇಳಿಕೆ. ಹಾಗೆ ಮಾಡಿದರೆ ತಾವು ಯುದ್ಧದಲ್ಲಿ ಎಲ್ಲಾ ರೀತಿಯಲ್ಲೂ ನೆರವಾಗುವುದಾಗಿ ಹೇಳಿದರು. ೧೯೩೯ರ ನವಂಬರಿನಿಂದ ೧೯೪೨ರ ವರೆಗೂ ಕಾಂಗ್ರೆಸ್ಸಿಗೆ ಇದರ ಬಗ್ಗೆ ಸರ್ಕಾರದಿಂದ ಸರಿಯಾದ ಉತ್ತರ ಬರಲೇ ಇಲ್ಲ! ಕಾಂಗ್ರೆಸ್ಸನ್ನಾಗಲೀ ಯಾರನ್ನೇ ಆಗಲಿ ಕೇಳದೆ ಭಾರತದ ವೈಸರಾಯಿಯವರೂ ಯುದ್ಧ ಘೋಷಿಸಿಬಿಟ್ಟರು. ತಾವು ಯುದ್ಧದ ಆ ಜವಾಬ್ದಾರಿಯನ್ನು ವಹಿಸಲಾಗುವುದಿಲ್ಲವೆಂದು ಕಾಂಗ್ರೆಸ್ ಮಂತ್ರಿಮಂಡಲಗಳು ರಾಜೀನಾಮೆಕೊಟ್ಟುವು. ಜನ ತಮ್ಮ ಇಚ್ಛೆಯಿಂದ ಯುದ್ಧಕ್ಕೆ ಬೆಂಬಲಕೊಡುವಂತಿರಲಿಲ್ಲ. ಅದು ಕಾಂಗ್ರೆಸ್ಸಿಗೆ ತಿಳಿದಿತ್ತು. ಅಂತೂ ಸರ್ಕಾರಕ್ಕೂ ಕಾಂಗ್ರೆಸ್ಸಿಗೂ ಮತ್ತೆ ನೇರವಾದ ರೀತಿಯಲ್ಲೇ ವಿರೋಧವೆದ್ದಿತು. ರಾಮಘಡ ಕಾಂಗ್ರೆಸ್ಸು ರಚನಾತ್ಮಕ ಕಾರ್ಯಕ್ರಮವನ್ನು ಎಲ್ಲರೂ ಕೈಗೊಳ್ಳಬೇಕೆಂದು ತೀರ್ಮಾನಿಸಿತು.

೧೯೪೦ರ ಜೇಸಿಗೆಯ ಮೊದಲೇ ಜರ್ಮನಿ ಯೂರೋಪಿನ

ಎಲ್ಲಾ ದೇಶಗಳನ್ನೂ ಆಕ್ರಮಿಸಿಕೊಂಡುಬಿಟ್ಟಿತ್ತು. ಆಗ ಇಂಗ್ಲೆಂಡಿನಲ್ಲಿ ಚರ್ಚಿಲ್ಲರ ಮಿಶ್ರಮಂತ್ರಿಮಂಡಲಿ ಏರ್ಪಟ್ಟಿತು. ಅದರಲ್ಲಿ ಭಾರತ ಮಂತ್ರಿ ಅಮೆರಿಯವರು ಕನ್ಸರ್ವೇಟಿವ್ ಪಕ್ಷದವರು. ಈಗ ಕಾಂಗ್ರೆಸ್ ವರ್ಕಿಂಗ್‌ಕಮಿಟಿ ಮತ್ತೆ ಸೇರಿ ಭಾರತಕ್ಕೆ ಸ್ವಾತಂತ್ರ್ಯ ಕೊಡಬೇಕೆಂದೂ, ಕಾಂಗ್ರೆಸ್ಸು ದೇಶಕ್ಕೆ ದೇಶವನ್ನೇ ಇಂಗ್ಲೆಂಡಿನ ಪರವಾಗಿ ಯುದ್ಧಕ್ಕಿಳಿಸುವುದೆಂದೂ ಸೂಚಿಸಿತು. ಸರ್ಕಾರ ಇದಕ್ಕೆ ಒಪ್ಪಲಿಲ್ಲ. ಸತ್ಯಾಗ್ರಹದ ತೀರ್ಮಾನವಾಯಿತು. ಗಾಂಧೀಜಿ ವೈಯಕ್ತಿಕ ಸತ್ಯಾಗ್ರಹವನ್ನು ಆರಂಭಿಸಿದರು. ಸತ್ಯಾಗ್ರಹಿಗಳು ತಾವು ಯುದ್ಧದಲ್ಲಿ ಯಾವ ಬಗೆಯಲ್ಲಿಯೂ ಭಾಗ ವಹಿಸುವುದಿಲ್ಲವೆಂದು ಘೋಷಿಸುತ್ತಿದ್ದರು. ಗಾಂಧೀಜಿಯ ಅನುಮತಿಪಡೆದವರು ಮಾತ್ರ ಈ ಸತ್ಯಾಗ್ರಹದಲ್ಲಿ ಭಾಗ ವಹಿಸಬಹುದಾಗಿತ್ತು. ರಾಜೇಂದ್ರಬಾಬುವಿನ ಆರೋಗ್ಯ ಈ ಕಾಲದಲ್ಲಿ ಬಹಳ ಕೆಟ್ಟುದರಿಂದ ಗಾಂಧೀಜಿ ಅವರಿಗೆ ಸತ್ಯಾಗ್ರಹದಲ್ಲಿ ಭಾಗವಹಿಸಲು ಅನುಮತಿ ಕೊಡಲಿಲ್ಲ. ವ್ಯಕ್ತಿ ಸತ್ಯಾಗ್ರಹದಲ್ಲಿ ಬಹಳ ಮಂದಿ ಜೈಲಿಗೆ ಹೋದರು. ಸಾಮಾನ್ಯವಾಗಿ ಎಲ್ಲರಿಗೂ ಒಂದು ವರ್ಷದ ಸಜಾ ವಿಧಿಸುತ್ತಿದ್ದರು ರಾಜೇಂದ್ರಬಾಬು ಈ ಸಮಯದಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನದ ಆರಂಭೋತ್ಸವಕ್ಕಾಗಿ ಮೈಸೂರು ಸಂಸ್ಥಾನಕ್ಕೆ ಬಂದು ಇಲ್ಲಿನ ಸೌಂದರ್ಯ ಕಂಡು ಮೆಚ್ಚಿದರು.

ಯುದ್ಧದ ಸ್ಥಿತಿ ಬಹಳ ವಿಷಮಿಸಿದಾಗ ಕ್ರಿಪ್ಸ್‌ನಿಯೋಗ ಭಾರತಕ್ಕೆ ಬಂದಿತು. ಹೇಗಾದರೂ ಭಾರತದೊಂದಿಗೆ ಸಮಾಧಾನ ಮಾಡಿಕೊಳ್ಳುವ ಯೋಜನೆಯಿಂದ ಬಂದ ಕ್ರಿಪ್ಸ್‌ಸಂಧಾನ ಫಲಕಾರಿಯಾಗಲಿಲ್ಲ. ೧೯೪೧ ರಲ್ಲಿ ಜಪಾನು ಯುದ್ಧವನ್ನಾರಂಭಿಸಿ ಕೆಲವೇ ದಿನಗಳಲ್ಲಿ ಆಗ್ನೇಯ ಏಷ್ಯಾದ ಬಹಳ ಭಾಗವನ್ನು ಆಕ್ರಮಿಸಿಬಿಟ್ಟಿತು. ಬರ್ಮ ಕೂಡ ಬ್ರಿಟಿಷರ ಕೈಬಿಟ್ಟಿತು. ಮಲಯ ಜಪಾನರ ವಶವಾಯಿತು. ಬ್ರಿಟನ್ನಿನ ನೌಕಾಸೇನೆ ಜಪಾನಿನ ಎದುರಿಗೆ ನಿಲ್ಲದಾರದೆ ಹೋಯಿತು. ಜರ್ಮನ್ ಸೈನ್ಯಗಳು ಉತ್ತರ ಆಫ್ರಿಕಾವನ್ನಾಕ್ರಮಿಸಿದ್ದುವು. ಭಾರತದಲ್ಲಿ ಜರ್ಮನ್ ಮತ್ತು ಜಪಾನಿ ಸೈನ್ಯಗಳು ಒಂದು

ಗೂಡುವುದೆಂದು ಬ್ರಿಟನ್ನಿನ ಹೆದರಿಕೆ ! ಹೀಗಾಗಿ ಬ್ರಿಟನ್ನಿನ ಯುದ್ಧ ಸ್ಥಿತಿ ಬಹಳ ವಿಷಮಗೊಂಡಿತು. ಆಗ ಕ್ರಿಪ್ಸ್ ಯೋಜನೆ ಭಾರತದ ನಾಯಕರ ಮುಂದೆ ಇಡಲಾಯಿತು. ಇದು ನಡೆದುದು ೧೯೪೨ ನೆಯ ಮಾರ್ಚಿಯಲ್ಲಿ. ಆಗಿನ ಭಾರತದ ವೈಸರಾಯರ ಕೌನ್ಸಿಲ್ಲಿನಲ್ಲಿ ಭಾರತೀಯರಿಗೆ ಹೆಚ್ಚು ಸ್ಥಾನ ಕೊಡುವುದು. ಮತ್ತು ಭಾರತಕ್ಕೆ ಯುದ್ಧಾನಂತರ ಉಪನಿವೇಶಕ ಸ್ವರಾಜ್ಯಕೊಡುವುದೇ ಈ ಯೋಜನೆಯ ಸೂತ್ರಗಳು. ಅಲ್ಲದೆ ಮುಸ್ಲಿಂ ಲೀಗಿಗೆ ಸಮಾಧಾನ ಮಾಡಲು ಒಂದು ಕೊಕ್ಕೆಯನ್ನು ಸೇರಿಸಿದರು. ಯಾವುದಾದರೂ ಪ್ರಾಂತ್ಯ ತನಗಿಷ್ಟ ಬಂದರೆ ಭಾರತ ರಾಜ್ಯದಿಂದ ತಾನು ಬೇರೆಯಾಗಲು ಹಕ್ಕುಕೊಟ್ಟರು ಇದರಿಂದ ಯಾವಾಗೆಂದರೆ ಆಗ ಪಾಕೀಸ್ತಾನ ಸ್ಥಾಪಿಸಿಕೊಳ್ಳುವ ಅನುವು ಮಾಡಿಕೊಟ್ಟರು. ಕಾಂಗ್ರೆಸ್ಸು ಕ್ರಿಪ್ಸ್ ಯೋಜನೆಯನ್ನು ಒಪ್ಪಲಿಲ್ಲ. ರಾಜಗೋಪಾಲಾಚಾರಿಯವರು ಕಾಂಗ್ರೆಸ್ಸಿನ ಈ ಧೋರಣೆಯನ್ನು ಒಪ್ಪದೆ ಕಾಂಗ್ರೆಸ್ಸಿನಿಂದ ದೂರವಾದರು. ೧೯೪೨ ರ ಆಗಸ್ಟ್ ತಿಂಗಳಲ್ಲಿ ಭಾರತ ಮುಂದೇನು ಮಾಡಬೇಕೆಂದು ಮುಂಬಯಿಯಲ್ಲಿ ಸೇರಿದ ಕಾಂಗ್ರೆಸ್ಸು ತೀರ್ಮಾನಕ್ಕೆ ಬಂದಿತು. ಆಗಸ್ಟ್ ೯ ರಂದು ಕ್ರಾಂತಿಯ ಆರಂಭವಾಯಿತು. ಕಾಂಗ್ರೆಸ್ಸಿನ ನಾಯಕರನ್ನೆಲ್ಲಾ ಸರ್ಕಾರ ಬಂಧಿಸಿತು. ದೇಶದಲ್ಲೆಲ್ಲಾ ಸತ್ಯಾಗ್ರಹ ತಾನೇ ತಾನಾಗಿ ಆರಂಭವಾಯಿತು. ಸರ್ಕಾರ ದೇಶದ ಜನತೆಯಮೇಲೆ ಯುದ್ಧ ಹೂಡಿತು. ಈ ಕ್ರಾಂತಿಯನ್ನು ದಮನಗೊಳಿಸಲು ವಿಮಾನಗಳಿಂದ ಬಾಂಬುಗಳನ್ನು ಸುರಿಸಿತು. ಹಳ್ಳಿಗಳನ್ನು ಸುಟ್ಟಿತು. ಲಕ್ಷಾಂತರ ಮಂದಿಯನ್ನು ಸೆರೆಗೆ ಹಾಕಿತು.

೧೯೪೨ರ ಆಗಸ್ಟ್ ೮ನೆಯ ತಾರೀಖಿನ ರಾತ್ರಿ ೧೦ ಗಂಟೆಯ ವೇಳೆಗೆ ಕಾಂಗ್ರೆಸ್ ಸಮಿತಿ ಸತ್ಯಾಗ್ರಹದ ತೀರ್ಮಾನ ಕೈಗೊಂಡಿತು. ಈ ಸಭೆಗೆ ತಮ್ಮ ಅನಾರೋಗ್ಯದಿಂದ ರಾಜೇಂದ್ರಬಾಬು ಬರಲಾಗಲಿಲ್ಲ. ಅಂದೇ ಗಾಂಧೀಜಿ ತಮ್ಮ ಮಂತ್ರ "ಮಾಡು ಇಲ್ಲ ಮಡಿ" ಎಂಬುದನ್ನು ಹೇಳಿದ್ದರು. ರಾಜೇಂದ್ರಬಾಬು ಪಾಟ್ನಾದಲ್ಲಿದ್ದರು. ೯ ನೆಯ ತಾರೀಕು ಬೆಳಿಗ್ಗೆ "ಸರ್ಚ್‌ಲೈಟ್" ಪತ್ರಿಕೆಯಲ್ಲಿ ಮುಂಬಯಿಯ

ಕಾರ್ಯಕಲಾಪಗಳನ್ನು ರಾಜೇಂದ್ರಬಾಬು ಓದುತ್ತಿದ್ದರು. ಆಗ ಹೊರಗೆ ಜಿಲ್ಲಾಧಿಕಾರಿ ಬಂದರು. ಬಂದವರೇ ರಾಜೇಂದ್ರಬಾಬುವಿನ ಹತ್ತಿರ ಕುಳಿತು ಅವರ ಆರೋಗ್ಯದ ಬಗ್ಗೆ ವಿಚಾರಿಸಿದರು. ಈ ವೇಳೆಗಾಗಲೇ ಗಾಂಧೀಜಿ ಮತ್ತಿತರ ಬಂಧನದ ಸುದ್ದಿಯನ್ನು ರೇಡಿಯೋ ಮೂಲಕ ರಾಜೇಂದ್ರಬಾಬು ಕೇಳಿದ್ದರು. ಆದ್ದರಿಂದ ಜಿಲ್ಲಾಧಿಕಾರಿಗಳು ಯಾಕೆ ಬಂದಿರುವರೆಂದು ಅವರಿಗೆ ತಿಳಿಯಿತು. ರಾಜೇಂದ್ರಬಾಬುವಿನ ಅಸ್ವಸ್ಥತೆಯಿಂದ ಅವರನ್ನು ಬಂಧಿಸಬೇಕೇ ಬೇಡವೇ ಎಂದು ಸರ್ಕಾರದ ಯೋಚನೆಯಾಗಿತ್ತು. ಜಿಲ್ಲಾಧಿಕಾರಿಗಳು ಒಬ್ಬ ಸಿವಿಲ್ ಸರ್ಜನ್ನನ್ನು ಕರೆದುಕೊಂಡು ಬಂದು ರಾಜೇಂದ್ರಬಾಬುವಿನ ಆರೋಗ್ಯವನ್ನು ಪರಿಶೀಲಿಸಿದರು- ಈಗ ದೂರದ ಪ್ರಯಾಣಕ್ಕೆ ಅವರು ಯೋಗ್ಯರಾಗಿಲ್ಲವೆಂದು ವೈದ್ಯರು ಹೇಳಿದುದರಿಂದ ರಾಜೇಂದ್ರಬಾಬುವನ್ನು ಬಾಂಕೀಪುರ ಸೆರೆಮನೆಯಲ್ಲೇ ಕೆಲವುದಿನ ಇಟ್ಟರು. ದಿನವೂ ಹೊರಗಿನಿಂದ ನೂರಾರುಮಂದಿ ಸತ್ಯಾಗ್ರಹಿಗಳು ಸೆರೆಮನೆಗೆ ಬರುತ್ತಿದ್ದರು. ಅವರಿಂದ ಸುದ್ದಿ ಬರುತ್ತಿತ್ತು. ರಾಜೇಂದ್ರಬಾಬು ಸೆರೆಮನೆಯಲ್ಲಿ ಪಾಕಿಸ್ಥಾನ ಸಮಸ್ಯೆಯ ಬಗ್ಗೆ (India Divided) ಎಂಬ ಭಾರೀ ಗ್ರಂಥವನ್ನು ಬರೆದರು. ಇದನ್ನು ಟೈಪು ಮಾಡಲು ಸರ್ಕಾರ ಅನುಮತಿ ಕೊಟ್ಟಿತು. ೧೯೪೪ರ ಮಾರ್ಚಿಯತನಕ ಬಾಂಕೀಪುರ ಸೆರೆಮನೆಯಲ್ಲಿ ರಾಜೇಂದ್ರಬಾಬುವನ್ನು ಒಬ್ಬರೇ ಒಬ್ಬರು ಸಹವಾಸಿಗಳೊಂದಿಗೆ ಇಟ್ಟಿದ್ದರು. ಅನಂತರ ಸರ್ಕಾರ ಇವರು ಕೇಳಿದ ಕೆಲವು ಮಿತ್ರರನ್ನು ಇವರ ಜತೆಗೆ ಕಳಿಸಲು ಒಪ್ಪಿತು. ೧೯೪೫ರಲ್ಲಿ ರಾಜೇಂದ್ರಬಾಬುವನ್ನು ಉಳಿದ ನಾಯಕರೊಂದಿಗೆ ಬಿಡುಗಡೆ ಮಾಡಿದರು. ಅನಂತರ ಲಾರ್ಡ್‌ಮೌಂಟ್‌ಬೇಟನ್ನರ ಪ್ರಯತ್ನದಿಂದ ೧೯೪೬ರಲ್ಲಿ ದಿಲ್ಲಿಯಲ್ಲಿ ಅಸ್ಥಾಯಿ ಸರ್ಕಾರ ಸ್ಥಾಪಿತವಾಯಿತು. ಕೆಲವೇ ದಿನಗಳಲ್ಲಿ ಎಲ್ಲೆಲ್ಲಿಯೂ ಹಿಂದೂಮುಸ್ಲಿಂ ಹೊಡೆದಾಟಗಳಾಗಿ ಜನರ ಕೊಲೆಗಳಾದುವು. ಬಂಗಾಳ ಮತ್ತು ಪಂಜಾಬುಗಳಲ್ಲಿ ಇದು ವಿಪರೀತವಾಯಿತು. ಇದರಿಂದ ಕಾಂಗ್ರೆಸ್ಸು ಜನಹತ್ಯೆಯನ್ನು ನಿಲ್ಲಿಸಲು ಪಾಕೀಸ್ಥಾನಕ್ಕೊಪ್ಪಿತು. ೧೯೪೭ರ ಆಗಸ್ಟ್ ೧೫ರಂದು ಭಾರ

ತಕ್ಕೆ ಉಪನಿವೇಶಿಕ ಸ್ವಾತಂತ್ರ್ಯ ಸಿಕ್ಕಿತು. ಹೊಸ ವಿಧಾನ ರಚಿಸಲು ರಾಜ್ಯಾಂಗರಚನಾಸಮಿತಿಯನ್ನು ಏರ್ಪಡಿಸುವ ಯೋಚನೆಯೂ ಆಯಿತು.

---

## ೧೦

## ೨೬ ಜನವರಿ ೧೯೫೦

ರಾಜೇಂದ್ರಬಾಬು ಹೊಸ ಸರ್ಕಾರದಲ್ಲಿ ಕೆಲವು ದಿವಸ ಆಹಾರ ಮಂತ್ರಿಗಳಾಗಿದ್ದರು. ಆದರೆ ಅವರ ಆರೋಗ್ಯ ಹದಗೆಟ್ಟಿತು. ಜೊತೆಗೆ ಕೆಲಸವೂ ಬಹಳವಾದ್ದರಿಂದ ಅದನ್ನು ಅವರು ಬಿಡಬೇಕಾಯಿತು. ೧೯೪೭ರ ಆಗಸ್ಟ್ ೧೫ರಂದು ಭಾರತ ಸ್ವತಂತ್ರವಾಯಿತು. ಕೊನೆಯ ಬ್ರಿಟಿಷ್ ವೈಸರಾಯ್ ಮೌಂಟ್‌ಬೇಟನ್ನರೇ ಸ್ವತಂತ್ರ ಭಾರತದ ಮೊದಲನೆಯ ಗವರ್ನರ್ ಜನರಲ್ಲರಾಗಿ ಕೆಲಸ ಮಾಡಿದರು. ಭಾರತದ ಹೊಸ ನ್ಯಾಯಾಂಗ ರಚಿಸಲು ಕಾನ್‌ಸ್ಟಿಟ್ಯೂಯೆಂಟ್ ಅಸೆಂಬ್ಲಿ ಚುನಾಯಿತವಾಯಿತು. ಮೊದಲದಿನ ಡಾಕ್ಟರ್ ಸಚ್ಚಿದಾನಂದ ಸಿನ್ಹರೇ ಅಧ್ಯಕ್ಷರಾಗಿದ್ದರು. ಆದಿನ ರಾಜೇಂದ್ರಬಾಬುವೇ ಅಧ್ಯಕ್ಷರಾಗಿ ಚುನಾಯಿತರಾದರು. ಈ ರಾಜ್ಯಾಂಗಚನಾ ಸಭೆ ಭಾರತಕ್ಕೊಂದು ನೂತನ ರಾಜ್ಯಾಂಗವನ್ನು ರಚಿಸಿಕೊಟ್ಟಿದೆ. ಇದರಂತೆ ೧೯೫೦ರ ಜನವರಿಯ ೨೬ರಂದು ಭಾರತ ಲೋಕರಾಜ್ಯವಾಯಿತು. ಈತನಕ ಬ್ರಿಟಿಷ್ ಸರ್ಕಾರದೊಂದಿಗೆ ಇದ್ದ ಉಪನಿವೇಶಕ ಸಂಬಂಧ ಈಗ ತಪ್ಪಿತು. ರಾಜಾಜಿಯುವರು ಕೊನೆಯ ಗವರ್ನರ್ ಜನರಲ್ಲರಾಗಿದ್ದರು. ಜನವರಿ ೨೫ನೆಯ ತಾರೀಕು ರಾಜೇಂದ್ರಬಾಬುವನ್ನು ಭಾರತ ನ್ಯಾಯಾಂಗಸಭೆ ಲೋಕರಾಜ್ಯದ ಮೊದಲನೆಯ ಅಧ್ಯಕ್ಷರನ್ನಾಗಿ ಚುನಾಯಿಸಿತು. ಗಾಂಧೀಜಿಯ ಸಮಾಧಿಯ ಬಳಿ ಹೋಗಿ ಪ್ರಾರ್ಥನೆ ಸಲ್ಲಿಸಿ ಬಂದು ಬಾಬುರಾಜೇಂದ್ರಪ್ರಸಾದರು ೨೬ನೆಯ ಜನವರಿ ೧೦ ಗಂಟೆಗೆ ಭಾರತಲೋಕರಾಜ್ಯದ ಮೊದಲನೆಯ ಅಧ್ಯಕ್ಷರಾಗಿ ಪದವಿ ಸ್ವೀಕಾರಮಾಡಿದರು.

ಪಂಡಿತ ಜವಹರಲಾಲ ನೆಹರೂರವರದು ವಿದೇಶದ ರಾಜಕೀಯಗಳ ವ್ಯಾಸಂಗದಲ್ಲಿ ನುರಿತ ಅಂತರರಾಷ್ಟ್ರೀಯದೃಷ್ಟಿ, ಸರದಾರ್ ವಲ್ಲಭಭಾಯಿ ಪಟೇಲರದು ಹಿಡಿದ ಹಟ ಸಾಧಿಸಿ, ಎಷ್ಟೇ ಕಷ್ಟವಾದರೂ

ಕೊನೆಮುಟ್ಟಿಸುವ ಕಬ್ಬಿಣದ ಮುಷ್ಟಿಯ ರಾಷ್ಟ್ರೀಯವಾದ. ರಾಜೇಂದ್ರ ಬಾಬುವಿನದು ನಯದ, ಸಮಾಧಾನದ ರೀತಿ. ಗಾಂಧೀಜಿಯವರ ಕೈಕೆಳಗೆ ಸುರಿತು, ಬಿಹಾರ್ ಪ್ರಾಂತವೇ ಮಾದರಿಯ ಪ್ರಾಂತವೆಂದು ಹೇಳಿಸಿದ ರಚನಾತ್ಮಕ ಕಾರ್ಯಕರ್ತರು. ಭಾರತಕ್ಕೆ ಇಂತಹ ರಚನಾತ್ಮಕ ಕಾರ್ಯಕರ್ತರು ಮೊದಲನೆಯ ಅಧ್ಯಕ್ಷರಾಗಿ ದೊರೆತುದು ದೇಶದ ಪುಣ್ಯ. ರಾಜೇಂದ್ರಬಾಬು ಹೆಚ್ಚು ಮಾತಿನವರಲ್ಲ. ಆದರೆ ಹೆಚ್ಚು ಕೆಲಸದವರು. ಕೆಲಸ ಮಾಡಿದುದನ್ನು ಬಾಯಲ್ಲಿ ಹೇಳಿಕೊಳ್ಳುವವರಲ್ಲ. ತನ್ನತನವನ್ನು ಮುಚ್ಚಿಟ್ಟುಕೊಳ್ಳುವ ಸಂಕೋಚ ಸ್ವಭಾವ. ಆದರೆ ದೃಢನಿಶ್ಚಯದಿಂದ ಕಾರ್ಯಸಾಧಿಸುವವರು, ಗಾಂಧೀಜಿಯ ಪ್ರಿಯಶಿಷ್ಯರು, ಸತ್ಯನಿಷ್ಠೆ, ಅಹಿಂಸೆಯಪಾಲನೆ ಮತ್ತು ರಚನಾತ್ಮಕ ಕಾರ್ಯಕ್ರಮದ ಋಷಿ, ಭಾರತಲೋಕರಾಜ್ಯದ ಮೊದಲನೆಯ ಅಧ್ಯಕ್ಷ ಬಾಬುರಾಜೇಂದ್ರಪ್ರಸಾದರು !